# ಜೈ ವಿದ್ಯಾರ್ಥಿ !

ವಿಶ್ವ - ರಾಷ್ಟ್ರ - ಸಂಸ್ಕೃತಿ
ಸ್ವದೇಶ - ಸ್ವಭಾಷೆ - ಸತ್ ಸಾಹಿತ್ಯ
ಪರಿಜ್ಞಾನಗಳ ವ್ರತದಿಂದೆ-

ಸತ್ಯ - ಶಿಸ್ತು - ಶಕ್ತಿ - ಶಾಂತಿ
ಜ್ಞಾನ - ವಿಜ್ಞಾನ - ಸುಜ್ಞಾನ
ಅಭಿಜ್ಞಾನಗಳ ಪ್ರೇಮದಿಂದೆ-

ವಿಶ್ವಶಾಂತಿಯ - ವಿಶ್ವಪಂಥದಿ
ವಿಶ್ವಪಾತ್ರಿ - ವಿಶ್ವವೀಥಿ ಮೆಟ್ಟಿ
ವಿಶ್ವಜೀವನೀ ಪಾತ್ರವಾಗೆ-

ಅಂತೇವಾಸಿಗಳ ಸರ್ವೋದ್ಧಾರ !
ಸಂಜೀವನಾ ಪರಮಪಾವನಾ
ಜೈ ವಿದ್ಯಾರ್ಥಿ ! ಜೈ ವಿದ್ಯಾಧನ !

# ದೂರದೇಶದಲ್ಲಿ

ಮಲ್ಲಿಕಾ

ಮನವು ಕಲ್ಪವಾಗದಿರೆ
ಮತ್ತೆ ಚಿತ್ತ ವಿಕಾಸಗೊಳ್ಳದಿರೆ
ಅಂಥ ವಿದ್ಯೆಯಿಂದೇನೈ ?

Doora Deshadalli in Kannada by "Mallika"
Published by Lakshmi Prakashana
Kadidal Nilaya, No.359, 14th Cross
Sadashivanagar, Bangalore - 560 080

ಮುದ್ರಣ ವರ್ಷ : ೧೯೯೯



ಬೆಲೆ : ಎಂಟು ರೂಪಾಯಿ

ಮುದ್ರಕರು :
ನ್ಯೂ ಐಡಿಯಾಸ್
೩೦, ಬೈರಸಂದ್ರ ಮುಖ್ಯರಸ್ತೆ
ಜಯನಗರ ಒಂದನೇ ಬ್ಲಾಕ್ ಪೂರ್ವ
ಬೆಂಗಳೂರು - ೫೬೦ ೦೧೧

"ಶ್ರೀ ವಿನಾಯಕಪಾದಾರ್ಪಣಮಸ್ತು"

# ದೂರ ದೇಶದಲ್ಲಿ

(ಶಿಶು ಸಾಹಿತ್ಯ)

ಮಲ್ಲಿಕಾ

ಲೇಖಕರು ★ ಪ್ರಕಾಶಕರು
ಲಕ್ಷ್ಮೀ ಪ್ರಕಾಶನ
೩೫೯, ಕಡಿದಾಳ್ ನಿಲಯ,
೧೪ನೇ ಕ್ರಾಸ್, ಸದಾಶಿವನಗರ
ಬೆಂಗಳೂರು - ೫೬೦ ೦೮೦

## ಪರಿವಿಡಿ

# ನಿವೇದನೆ

ಪ್ರಸ್ತುತ, ಜಾಗೃತ ಜೀವನಕ್ಕೆ ಮುಂಬೆಳಕು ಬೀರಬೇಕಾದರೆ ಸರ್ವೋತ್ತಮ ತಳಹದಿಯೇ ಭದ್ರ ಬುನಾದಿ. ಮಕ್ಕಳ ಸಾಹಿತ್ಯ ಹೆಚ್ಚು ಹೆಚ್ಚಾಗಿ ಸೃಷ್ಟಿಯಾಗುತ್ತಿರುವುದು ಆ ದೃಷ್ಟಿಯಿಂದಲೇ. ಕವಿಗಳೂ ಸಾಹಿತಿಗಳೂ ಅದರಲ್ಲಿ ಆಸಕ್ತರು ಕೂಡ. ಆದರೆ ಪ್ರಕಾಶನದ ಬವಣೆ ದೇವರಿಗೇ ಸಂವೇದ್ಯ. ಬೆಲೆಗಳು ಗಗನದಲ್ಲಿ, ಗ್ರಾಹಕರ ಕೈ ಮೊಟಕು. ಆರ್ತಿಕ ಸ್ಥಗಿತ. ಮೇಲಾಗಿ ಸರಕಾರದ ನಿರ್ಲಕ್ಷ್ಯ. ಇಂತಹ ದುಸ್ಥಿತಿಯಲ್ಲಿ ಕವಿಗಳು ಮಾಡುವುದಾದರೂ ಏನು? ಲೇಖನಿಯನ್ನು ಬದಿಗಿಡೋಣವೇ ಎಂದರೆ ಸಂಕಟ. ಬರೆದರೆ ಸಂಕಷ್ಟದ ಪ್ರಸಂಗ. ಕೊಳ್ಳುವವರಿಲ್ಲದೆ ಕೊಳೆಯುವ ಗೋಳಿನಿಂದ ಮನಸ್ಸು ತಳಮಳಗೊಳ್ಳುತ್ತದೆ.

ಇಂಥ ಪರಿಸ್ಥಿತಿಯಲ್ಲಿ ಸರಕಾರ ಸಾಕಷ್ಟು ಪುಸ್ತಕಗಳನ್ನು ಕೊಳ್ಳಲು ಮುಂದೆ ಬರದಿದ್ದರೆ ಉತ್ತಮ ಸಾಹಿತ್ಯ ಮೂಲೆಗುಂಪಾಗುವುದು ಸತ್ಯ. ಕವಿಗಳ ಬದುಕು ನಿರಾಸೆ-ನಿಸ್ಸಾರಗಳ ಕೂಟವೂ ಆಗುತ್ತೆ. ಇದನ್ನು ಸಾರ್ವಜನಿಕರೂ ಗಮನಿಸುವುದು ಅಗತ್ಯ.

''ದೂರ ದೇಶದಲ್ಲಿ'' ಶಿಶು ಸಾಹಿತ್ಯಕ್ಕಾಗಿ ಬರೆದ ಸಣ್ಣ ಕತೆಗಳ ಸಂಕಲನ. ಇಂಥ ಸಣ್ಣ ಸಂಕಲನ ಇನ್ನೂ ಕೆಲವಾರು ಸಿದ್ಧ ಹಸ್ತ ಪ್ರತಿಗಳಿದ್ದು ಆರ್ಥಿಕ ಮುಗ್ಗಟ್ಟಿನಿಂದ ಪ್ರಕಟಿಸಲಾಗದೆ ಹಾಗೆಯೇ ಉಳಿದಿದೆ. ಇದು ವಿಶಾದಕರ.

ಶ್ರೀ ಪ್ರಮಾಥಿ ಸಂವತ್ಸರ
ಮಾರ್ಗಶಿರ ಬಹುಳ ಅಷ್ಟಮಿ
೩೦-೧೨-೧೯೯೯

ಮಲ್ಲಿಕಾ

## ಚೆನ್ನ-ಚೆನ್ನಿ

ಚೆನ್ನ-ಚೆನ್ನಿ ಅಂದರೆ ಅವು ಮುದ್ದು ಮುದ್ದಾದ ಜೋಡಿ ಜಿಂಕೆಗಳು.

ಗಂಡು ಜಿಂಕೆ ಕವಲು ಕವಲಾದ ಸುಂದರ ಕೋಡುಗಳನ್ನು ಹೊಂದಿದ್ದು ಸುಂದರವಾಗಿ ಕಾಣಿಸುತ್ತಿದ್ದುದು ನಿಜ. ಅದಕ್ಕೆ ಅದೇ ತುಂಬಾ ಹೆಮ್ಮೆ. ಸದಾ ತಲೆಯೆತ್ತಿ ರಾಜ ಠೀವಿಯಿಂದ ಟಕ್ಕ ಟಕ್ಕ ನಡೆಯುತ್ತ ಮುಂದೆ ಮುಂದೆ ಹೋಗುತ್ತಿದ್ದರೆ ಚೆನ್ನಿ ನಿಧಾನವಾಗಿ ನಡೆಯುತ್ತ ಹಿಂಬಾಲಿಸುತಿತ್ತು.

ಒಮ್ಮೆ ಎರಡೂ ಒಂದು ತೊರೆಗೆ ನೀರು ಕುಡಿಯಲು ಹೋದುವು. ನೀರು ಕುಡಿಯುತ್ತ ಎರಡೂ ನೀರಿನಲ್ಲಿ ಮುಖ ನೋಡಿಕೊಂಡವು.

ಚೆನ್ನ ಮಡದಿಯ ಮೂತಿಗೆ ಮೂತಿ ತೀಡಿ 'ನನ್ನ ಚಿತ್ರ ಹೇಗಿದೆ ನೋಡಿದೆಯಾ?' ಎಂದಿತು ಬಲೂ ಜಂಭದಿಂದ.

'ನಿನ್ನದು ಮಾತ್ರವೇನು, ನನ್ನದೂ ಕಂಡಿತು.'

'ನಿನ್ನ ಚಿತ್ರ ಮೊದ್ದು ಮೊದ್ದು! ಕೊಂಬಿಲ್ಲ, ಕೋಡಿಲ್ಲ!'

'ಕೋಡಿಲ್ಲದೆ ಮುದ್ದಾಗಿರುವುದೇ ಚಂದ!'

'ಹೋಗುಹೋಗು! ನೀನೊಂದು ಮೊದ್ದು! ಕೋಡಿದ್ದರೆ ರಾಜ!

'ಕೋಡಿಲ್ಲದಿದ್ದರೆ ಸುಂದರ ರಾಣಿ ಎಂಬುದನ್ನು ನೀನು ಒಪ್ಪಿಕೋ!'

'ಬರೀ ರಾಣಿಯಿಂದೇನಾದೀತು? ರಾಜ ಇದ್ದರೆ ಗಾಂಭೀರ್ಯ!'

'ರಾಣಿ ಇದ್ದರೆ ಶೋಭೆ!'

'ಶೋಭೆ-ಸೌಂದರ್ಯ ಏನಿದ್ದರೂ ಬರೀ ಆಡಂಬರ ಅಷ್ಟೆ. ರಾಜಕಾರ್ಯಕ್ಕೆ ರಾಜ ಇರಲೇ ಬೇಕು!'

'ಒಂದು ಕಾಲದಲ್ಲಿ ರಾಜತ್ವಕ್ಕೆ ಬೆಲೆಯಿತ್ತು. ಈಗೆಲ್ಲಿದೆ ಬೆಲೆ?'

'ನಿನಗೊತ್ತಿಲ್ಲ ಚೆನ್ನೀ! ಈಗಲೂ ಬೆಲೆಯಿದೆ!'

'ನಿನಗೊತ್ತಿಲ್ಲ ಚೆನ್ನ! ನೀನು ಜಂಬದಿಂದ ಮೈಮರೆತಿದ್ದೀ!'

'ನಾನು ಮೈಮರೆತಿದ್ದೇನೆಯೇ ? ನೀನೇನು ಹೇಳುತಿದ್ದೀ?'

‘ನಾನು ಹೇಳುವುದನ್ನು ಸ್ಪಷ್ಟವಾಗಿ ಹೇಳಿರುವೆ. ನೀನೇ ಈಗ ಅರ್ಥಮಾಡಿಕೊಳ್ಳಲಾರದ ಮಂಪರದಲ್ಲಿದ್ದೀ!’

‘ಅಂದರೆ....?’

‘ಜಂಭದಿಂದ ನಿನಗೆ ತಲೆ ಕೆಟ್ಟಿದೆ!’

‘ಛೇಃ ಛೆ:! ನೀನೇನು ಹೇಳುವಮಾತು?’

ಎಲ್ಲೋ ಸರಸರ ಸದ್ದು. ಎರಡೂ ಕಿವಿ ನಿಮಿರಿಸಿ ಅತ್ತಲೇ ದೃಷ್ಟಿ ನೊಟ್ಟುವು. ಅದೇ ನೇರಕ್ಕೆ ಕೆಂಬಣ್ಣದ ತೋಳ್ನಾಯಿ!

ಆ ಕೂಡಲೇ ಎರಡೂ ಅಲ್ಲಿಂದ ದೌಡಾಯಿಸಿ ಓಡಿದುವು. ಓಡಿಯೇ ಓಡಿದುವು.

ಬಾಲ್ಯದಲ್ಲಿ ವಿದ್ಯೆಯನು
ಕಲಿಯದಿರೆ ಬದುಕಿನಲಿ
ಎಂದೆಂದಿಗೂ ಇಲ್ಲವು
ಜೀವನ ಸುಖ ಶಾಂತಿ ಕಣಾ.



# ಅವಿವೇಕಿ ಸಾರಂಗಿ

ಆ ಸುಂದರ ಸಾರಂಗಿಯ ಹೆಸರು ಸರಸಿ.

ಅದು ನಡಿಗೆಯಲ್ಲಿ ತುಂಬ ಚುರುಕಾದರೂ ಬದ್ಧಿಯಲ್ಲಿ ಮೊದ್ದು. ಚಂಗನೆ ನೆಗೆಯುತ್ತ ಓಡಿತೆಂದರೆ ಕ್ಷಣದಲ್ಲಿ ಮಾಯವಾಗುವಷ್ಟು ಚುರುಕು. ನೋಟವೂ ಚುರುಕು. ಕಿವಿಗಳೂ ಚುರುಕು.

ಕಾಡಿನಲ್ಲಿ ಹಸುರು ಹಲ್ಲು ತಿಂದು ತಿಂದು ಬೆಳೆದು ದಷ್ಟಪುಷ್ಟವಾದ ಮೈ. ಚುಕ್ಕಿಚುಕ್ಕಿಯ ಮಿಂಚುಬಣ್ಣ. ಪಟಪಟಿಸುವ ಕಿವಿಗಳು. ಅತ್ತಿತ್ತ ಆಡಿಸುವ ಮುಂಡು ಬಾಲ. ಮುದ್ದು ಮುದ್ದಾದ ಮುಖ. ಅಂತೂ ಬಲೂ ಚೆಂದದ ಪ್ರಾಣಿ ಸರಸಿ.

ಆದಕ್ಕೇ ತನ್ನ ಚೆಂದದ ಬಗ್ಗೆ ಬಹಳ ಹೆಮ್ಮೆ. ಹೊಟ್ಟೆ ತುಂಬಿದ ಮೇಲೆ ಚಂಗ್ ಚಂಗನೆ ಕುಣಿದಾಡಿ ಸಂತೋಷದಿಂದ ಯಾವುದಾದರೂ ಪೊದೆಯನ್ನು ಸೇರಿ

ತಣ್ಣಗೆ ಮಲಗುತ್ತಿತ್ತು. ಅದು ದಟ್ಟವಾದ ಪೊದೆಯಲ್ಲಿ ಮಲಗುತಿದ್ದುದರಿಂದ ದುಷ್ಟ ಪ್ರಾಣಿಗಳ ಕಣ್ಣಿಗೆ ಬೀಳುತ್ತಿರಲಿಲ್ಲ.

ಒಮ್ಮೆ ಸರಸಿ ನೀರು ಕುಡಿದು ಅತ್ತಿಂದಿತ್ತ ಜಿಗಿದಾಡುತಿದ್ದಾಗಲೇ ಬೇಡನೊಬ್ಬ ಕಂಡ. ಅವನ ಕೈಯಲ್ಲಿ ಬಿಲ್ಲು ಬಾಣಗಳಿದ್ದುವು. ಅದನ್ನು ನೋಡುತ್ತಲೂ ಬಾಯಲ್ಲಿ ನೀರೂರಿತು. ಮಾಂಸದ ಆಸೆಗಾಗಿ ಅದರ ಬೆನ್ನಟ್ಟಿದ. ಅದು ಆ ಕ್ಷಣವೇ ಜೀವ ಭಯದಿಂದ ಓಡತೊಡಗಿತು.

ಸಾರಂಗಿ ಓಡಿ ಓಡಿ ಸೋತ ಬಳಿಕ ಒಂದು ಪೊದೆಯಲ್ಲಿ ಅಡಗಿ ಎದುಸಿರು ಬಿಡುತ್ತ ಮಲಗಿಕೊಂಡಿತು. ಬೆನ್ನಟ್ಟಿ ಬಂದಿದ್ದ ಬೇಡನೂ ಬಳಲಿದ ಕಾರಣ ಒಂದು ಬಂಡೆಯನ್ನೇರಿ ಕಾದು ಕುಳಿತ. ಅದು ಅಲ್ಲಿಯೇ ಸಮೀಪದಲ್ಲಿ ಅಡಗಿಕೊಂಡಿದೆ ಎಂಬುದು ತಿಳಿದಿತ್ತು ಅವನಿಗೆ.

ಮೊದ್ದು ಸಾರಂಗಿಗೆ ಮಾತ್ರ ಅವನು ಕಾದು ಕುಳಿತಿರುವುದು ತಿಳಿಯದು. ಸ್ವಲ್ಪ ಹೊತ್ತು ಸದ್ದಿಲ್ಲದೆ ಉರುಳಿತು. ಸುತ್ತಮುತ್ತ ಎಷ್ಟೊಂದು ಸೊಪ್ಪು! ಬಳ್ಳಿಯ ಕುಡಿಗಳು! ಅದನ್ನು ನೋಡುತ್ತ ಸುಮ್ಮನಿರಲಾದೀತೆ?

ಸಾರಂಗಿ ಎದ್ದು ಚಿಗುರು ಮೆಲ್ಲತೊಡಗಿತು. ಬಳ್ಳಿಗಳ ಕುಡಿಯನ್ನು, ಎಳೆದೆಳೆದು ಮೆಲ್ಲುವಾಗ ಗಿಡಗಳು ಗಲಗಲ ಅಲುಗಿ ಸರಸರ ಸದ್ದು ಮೂಡಿತು. ಕಾದಿದ್ದ ಬೇಡನ ಕಿವಿಕಣ್ಣುಗಳು ಚುರುಕಾದುವು. ಎದ್ದು ನಿಂತು ಸದ್ದು ಬಂದೆಡೆಗೆ ಗುರಿಯಿಟ್ಟು ಬಾಣಬಿಟ್ಟ. ಅದು ನೇರವಾಗಿ ಬಂದು ಕೊರಳಿಗೆ ನಾಟಿತು.

ಸಾರಂಗಿ ಬ್ಯಾ ಬ್ಯಾ ಎಂದು ಅರಚಿ ಉರುಳಿ ಕೆಳಗೆ ಬಿತ್ತು. ಆಗ ಸಾರಂಗಿಗೆ ತಾನು ಎಂತಹ ತಪ್ಪು ಮಾಡಿದೆ ಎಂಬುದು ಅರ್ಥವಾಯಿತು. ತನಗೆ ತೆರೆಯೊಡ್ಡಿ ನೆರವು ನೀಡಿದ್ದ ಗಿಡಬಳ್ಳಿಗಳನ್ನು ತಿಂದು ಅನ್ಯಾಯ ಮಾಡಿ ಶತ್ರುವಿಗೆ ನನ್ನ ಸುಳಿವು ನಾನೇ ಕೊಟ್ಟೆ.... ಎಂದು ತನ್ನಲ್ಲೇ ಗೋಳಾಡುತಿದ್ದಂತೆಯೇ ಬೇಡ ಅಲ್ಲಿಗೆ ಬಂದ. ಸಾರಂಗಿ ಏಳಲು ಪ್ರಯತ್ನಿಸಿ ಆಗದೆ ಹಿಂದಕ್ಕೆ ಬಿತ್ತು. ಬೇಡ ಅದರ ಕೊರಳಲ್ಲಿ ಸಿಕ್ಕಿದ್ದ ಬಾಣವನ್ನು ಕಿತ್ತು ತೆಗೆದ. ಜಿರ‍್ರನೆ ರಕ್ತ ಸುರಿಯಿತು. ಸ್ವಲ್ಪ ಹೊತ್ತು ನಿಂತು ನೋಡಿದ. ಸಾರಂಗಿ ಪ್ರಾಣ ಬಿಟ್ಟಿತು.

ಬೇಡ 'ವಾರೆವಾ! ಎಂತಹ ಚುರುಕು ಓಟ. ಆದರೂ

ಸಿಕ್ಕಿಬಿತ್ತು!' ಎಂದು ಅದನ್ನು ಬೆನ್ನಿನ ಮೇಲೆ ಹೊರಲಾರದೇ ಹೊತ್ತು ತನ್ನ ಬೀಡಿನ ಕಡೆಗೆ ನಡೆದ. ತನ್ನ ಬಳಲಿಕೆ ಸ್ವಲ್ಪವೂ ಗಮನಕ್ಕೆ ಬಾರದಷ್ಟು ಸಂತಸ ಅದರ ಲಾಭದಿಂದ.



## ತಂತ್ರಿ

ಅವನ ಹೆಸರು ತಂತ್ರಿ. ತೊಟ್ಟದ್ದು ಕಾಕಿ ಪ್ಯಾಂಟ್ ಮತ್ತು ಕಾಕಿ ಶರಟು.

ತಂತ್ರಿ ಬದುಕಿದ್ದೇ ಕಂತ್ರಿ ಬದ್ಧಿಯಿಂದ. ಅಲ್ಲಿ ಇಲ್ಲಿ ಹೊಂಚು ಹಾಕಿ ಅವರಿವರ ವಸ್ತುಗಳನ್ನು ಕದ್ದು ಮುಚ್ಚಿಟ್ಟು ಕಳ್ಳತನದಿಂದ ಮಾರಿ ಜೀವಿಸುತ್ತಿದ್ದ. ಆ ಕೆಟ್ಟ ರೂಢಿ ಅವನಿಗೆ ಹೇಸಿಗೆ ಎನಿಸಲಿಲ್ಲ. ಸದಾ ಕಳ್ಳತನ ಮಾಡುತ್ತಿದ್ದರೂ ಪೋಲೀಸರ ಕೈಗೆ ಸಿಕ್ಕಿರಲಿಲ್ಲ. ಎಂದೂ ಕೆಲಸ ಮಾಡಿದವನಲ್ಲ. ದುಡಿಮೆ ಎಂದರೆ ಹಿಡಿಸದು. ಅಲ್ಲಿ ಇಲ್ಲಿ ಕುಳಿತು, ಅಡ್ಡಾಡಿ ಕದಿಯಲು ಸಮಯವನ್ನು ಹೊಂಚು ಹಾಕುತ್ತಾ ಕಳ್ಳಗಣ್ಣಿನಿಂದ ನೋಡುತಿದ್ದ. ಅವನಿಗೆ ಅದೇ ಇಷ್ಟ.

ಯಾರಿಗೂ ತನ್ನ ಕಳ್ಳತನ ತಿಳಿಯದಷ್ಟು ಎಚ್ಚರಿಕೆ ವಹಿಸುತಿದ್ದ.

ಒಂದು ದಿನ ತಂತ್ರಿ ರೈಲು ನಿಲ್ದಾಣಕ್ಕೆ ಹೋದ. ಅಲ್ಲಿ

ಬಹಳ ಜನ ತುಂಬಿದ್ದರು. ಎಲ್ಲರೂ ಪೆಟ್ಟಿಗಗಳ ಸಹಿತ ಓಡಾಡುತಿದ್ದುದನ್ನು ಆಸೆಗಣ್ಣಿಂದ ನೋಡುತ್ತಿದ್ದ ತಂತ್ರಿ. ಅಲ್ಲೆಲ್ಲಾ ಸುತ್ತಾಡಿ ಕಲ್ಲು ಬೆಂಚಿನ ಮೇಲೆ ಕುಳಿತ. ಸ್ವಲ್ಪ ಹೊತ್ತಿನೊಳಗಾಗಿ ಒಬ್ಬ ಪ್ರಯಾಣಿಕ ತನ್ನ ಸಾಮಾನುಗಳೊಂದಿಗೆ ಬಂದು ಅದೇ ಬೆಂಚಿನ ಮೇಲೆ ಕುಳಿತು ರೈಲಿಗಾಗಿ ಕಾಯತೊಡಗಿದ.

ಹತ್ತು ನಿಮಿಷ ಮೀರಿದ್ದರೂ :ರೈಲು ಬಂದಿರಲಿಲ್ಲ. ರೈಲಿಗ್ಾಗಿ ಬಹಳ ಮಂದಿ ಕಾದಿದ್ದರು. ಜನ ಕಾದು ಕಾದು ಸೋತಮೇಲೆ ರೈಲು ಬಂದಿತು. ಆಗ ಜನರ ನುಗ್ಗಾಟವೇ ನುಗ್ಗಾಟ. ಈ ಪ್ರಯಾಣಿಕನೂ ತನ್ನ ಸಾಮಾನಿನೊಂದಿಗೆ ಅತ್ತ ಓಡಿದ. ಹಾಗೆ ಓಡುವಾಗ ಅವನ ಕೈ ಚೀಲದಿಂದ ಡಬ್ಬವೊಂದು ಉರುಳಿ ಬಿತ್ತು. ಅವನು ತೀರಾ ಅವಸರದಲ್ಲಿದ್ದುದರಿಂದ ಗಮನಿಸದೆ ಜನ ಜಂಗುಳಿಯಲ್ಲಿ ಕಣ್ಮರೆಯಾದ.

ತಂತ್ರಿಗೆ ಮೊದಲಿನಿಂದಲೂ ಅವನ ವಸ್ತುಗಳ ಮೇಲೆ ಕಣ್ಣಿತ್ತು. ಅವನು ಆಗ ಎಚ್ಚರವಹಿಸಿದ್ದುದರಿಂದ ಅಪಹರಿಸಲಾಗಿರಲಿಲ್ಲ. ಈಗ ಒಂದು ವಸ್ತುತಾನಾಗಿಯೇ ದಕ್ಕಿದಾಗ ಬಿಟ್ಟಾನೆಯೆ? ತಂತ್ರಿ ತಕ್ಷಣ ಎತ್ತಿಕೊಂಡು

ನೋಡಿದ. ಡಬ್ಬವನ್ನು ಕಾಗದದಲ್ಲಿ ಸುತ್ತಿ ದಾರದಿಂದ ಕಟ್ಟಲಾಗಿತ್ತು. ತಂತ್ರಿ ಸದ್ದಿಲ್ಲದೆ ಅದನ್ನು ತನ್ನ ಚೀಲಕ್ಕೆ ಸೇರಿಸಿದ. ಅಲ್ಲಿದ್ದ ಇತರರು ನೋಡದಿದ್ದುದರಿಂದ ಖುಷಿಯಾಯಿತು. ಗೆದ್ದೆ ಎಂದುಕೊಂಡ.

ಒಳಗೆ ಏನಿರಬಹುದು ?

ಬೆಲೆಯುಳ್ಳ ವಸ್ತುವಾಗಿದ್ದರೆ ಒಂದು ವಾರದ ಕವಳ ಒದಗಿಸಿಕೊಳ್ಳಬಹುದು. ನನ್ನ ಅದೃಷ್ಟ ಚೆನ್ನಾಗಿದ್ದುದರಿಂದ ತಾನಾಗಿಯೇ ದಕ್ಕಿದೆ. ಯಾರೂ ನೋಡಲಿಲ್ಲ ಎಂದುಕೊಂಡು ನಿಶ್ಚಿಂತೆಯಿಂದ ಮನೆಯ ಹಾದಿ ಹಿಡಿದ. ನಿಲ್ದಾಣವನ್ನು ಹಾಯ್ದು ಗೇಟಿನ ಬಳಿಗೆ ಬಂದಾಗ ಹಿಂದೆಯೇ ಹಿಂಬಾಲಿಸಿ ಬಂದ ಪೋಲಿಸಿನವ ಅಡ್ಡಗಟ್ಟಿ 'ಏನಿದೆ ನಿನ್ನ ಕೈಚೀಲದಲ್ಲಿ?' ಎಂದ ಗದ್ದರಿಸುವ ದನಿಯಲ್ಲಿ. ತಂತ್ರಿ ಭಯದಿಂದ ತಬ್ಬಿಬ್ಬಾಗಿ ಅವನನ್ನು ಪಿಳಿ ಪಿಳಿ ನೋಡಿದ.

'ಏನಿದೆ ತೆಗೆ?'

'ಇನ್ನೇನಿದ್ದೀತು....ನನ್ನ ವಸ್ತುಗಳು ಮಾತ್ರ.'

'ಹೇಳು ! ಏನೇನಿದೆ ಅದರಲ್ಲಿ ?'

'ಮತ್ತೆ?'

'ಮತ್ತಿನ್ನೇನಪ್ಪಾ, ಅದು ಇದು ಸಣ್ಣ ಪುಟ್ಟ ಸಾಮಾನು.'

'ತೆಗೆದು ತೋರಿಸು!'

'ಒಂದು ಕೈಚೀಲಕ್ಕಾಗಿ ಏಕಿಷ್ಟು ಗದ್ದಲ? ಎಲ್ಲರೂ ಐದಾರು ಸೂಟ್ ಕೇಸ್ ಒಯುತ್ತಾರೆ!.

'ಅದೆಲ್ಲಾ ಇರಲಿ, ಮೊದಲು ಬಿಚ್ಚು!'

ತಂತ್ರಿ ಕೈಚೀಲದಿಂದ ಬಟ್ಟೆ ತೆಗೆದಾಗ ಪೋಲೀಸ್ ಕೈಲಿದ್ದ ದೊಣ್ಣೆಯಿಂದ ಪೆಟ್ಟಿಗೆಯನ್ನು ಮುಟ್ಟಿ ಇದರಲ್ಲೇನಿದೆ?' ಎಂದ.

ಅವನ ನಡವಳಿಕೆಯಿಂದ ಪೋಲೀಸಿನವನ ಅನುಮಾನ ಇನ್ನಷ್ಟು ಹೆಚ್ಚಿತು. ಅವನು ದೊಣ್ಣೆಯಿಂದ ಬೆನ್ನಿಗೆ ಚುಚ್ಚಿ 'ಆಗಲಿ, ಅದನ್ನೂ ಬಿಚ್ಚಯ್ಯಾ ನೋಡಿ ಬಿಡೋಣ!' ಎಂದ.

'ಊಟ ಚೆಲ್ಲಿ ಹೋಗುತ್ತೆ ಸ್ವಾಮಿ!'

'ಇಲ್ಲೇ ತಿಂದು ಬಿಡು!'

ಸುತ್ತ ಮುತ್ತ ಇದ್ದವರೆಲ್ಲಾ ಗೊಳ್ಳನೆ ನಕ್ಕು ಬಿಟ್ಟರು.

ಆಗ ತಂತ್ರಿಗೆ ಬಹಳ ಪೇಚಿಗಿಟ್ಟು ಕೊಂಡಿತು. ನಿಧಾನವಾಗಿ ಆ ಪೆಟ್ಟಿಗೆಗೆ ಕೈ ಹಾಕಿದ. ಅದರ ಕಟ್ಟು ಬಲವಾಗಿತ್ತು. ಅದೊಂದು ಒಳ್ಳೆಯ ನೆವ. ಕಟ್ಟು ಬಿಚ್ಚಲಾಗದಂತೆ ನಟಿಸಿದ. ಸ್ವಲ್ಪ ಹೊತ್ತು ಸುಮ್ಮನಿದ್ದ

ಪೋಲೀಸಿನವ ತನ್ನ ಜೇಬಿನಿಂದ ಸಣ್ಣ ಚಾಕುವೊಂದನ್ನು ತೆಗೆದು ಸರಸರನೆ ದಾರವನ್ನು ಕತ್ತರಿಸಿ ಕಟ್ಟುಗಳನ್ನು ಬಿಡಿಸಿದ. ತಂತ್ರಿ ಇನ್ನು ನಟನೆ ಮಾಡುವುದು ಸಾಧ್ಯವಾಗದೆ ಪೆಟ್ಟಿಗೆಯ ಮುಚ್ಚಳ ತೆರೆದ.

ಅದರಲ್ಲಿದ್ದುದು ಗಾಂಜ!

ಪೋಲೀಸಿನವ ಥಟ್ಟನೆ ಅವನ ತೋಳು ಹಿಡಿದು 'ನಿನ್ನ ಹೆಂಡತಿ ಒಳ್ಳೆಯ ಊಟ ಕಟ್ಟಿದ್ದಾಳೆ! ಶಹಬ್ಬಾಸ್!!' ಎಂದು ಹಿರಿಯ ದನಿಯಲ್ಲಿ ನಕ್ಕ.

'ಸ್ವಾಮಿ! ಈ ಡಬ್ಬ ನನ್ನದಲ್ಲ ಪ್ರಯಾಣಿಕನೊಬ್ಬ ಓಡುವಾಗ ಅವನ ಕೈಚೀಲದಿಂದ ಕೆಳಗೆ ಬಿತ್ತು! ಖಂಡಿತವಾಗಿಯೂ ನನ್ನನ್ನು ನಂಬಿ!

'ಈಗಷ್ಟೆ ಊಟ ಎಂದೆಯಲ್ಲಾ? ನಿನಗೆ ಎಷ್ಟು ನಾಲಿಗೆಗಳಿವೆ?''

'ಇದರಲ್ಲೇನಿದೆ ಎಂಬುದು ತಿಳಿದಿರಲಿಲ್ಲ. ಏನೋ ಒಂದು ಹೋಳಬೇಕಾಯಿತು ಹೇಳಿದೆ ಸ್ವಾಮಿ! ಖಂಡಿತವಾಗಿಯೂ ಇದು ನನ್ನದಲ್ಲ!' ಎಂದು ಗೋಗರೆಯ ತೊಡಗಿದ, ತಂತ್ರಿ.

ನಿನ್ನ ಕಳ್ಳ ಆಟ ನಡೆಯುವುದಿಲ್ಲ. ನಡೆ ಸ್ಟೇಷನ್ನಿಗೆ!'

ತಂತ್ರಿ ಗೋಳಾಡಿ ಅತ್ತ. ಕಣ್ಣುಗಳಲ್ಲಿ ಕಂಬನಿ ಹರಿದು ಹೋಯಿತು. ತನ್ನ ಹಿಂದಿನ ಕಳ್ಳತನಗಳನ್ನು ನೆನೆದು ಆಗೆಲ್ಲಾ ಕಳ್ಳತನ ಮಾಡಿಯೂ ಪೋಲೀಸಿಗೆ ಸಿಕ್ಕಿರಲಿಲ್ಲ. ಈ ಸಲಿ ಕಳ್ಳತನ ಮಾಡದೆಯೇ ಸಿಕ್ಕಿಕೊಂಡೆ. ವಿಧಿ ನನ್ನನ್ನು ಸಿಕ್ಕಿಸಲೆಂದೇ ಪೆಟ್ಟಿಗೆಯನ್ನು ಕೆಳಗೆ ಬೀಳಿಸಿತೇನೋ...' ಎಂದು ತನ್ನಲ್ಲೇ ಬಹಳವಾಗಿ ನೊಂದುಕೊಳ್ಳುತ್ತ ಪೋಲೀಸಿನವನೊಂದಿಗೆ ಹೋದ.



## ಚಿತ್ತಿ-ಭಿತ್ತಿ

ಚಿತ್ತಿ-ಭಿತ್ತಿ ಎಂದರೆ ಯಾರು ಗೊತ್ತೆ?

ಅವು ಗಂಡ ಹೆಂಡತಿಯರಾದ ಮುದ್ದು ಮುದ್ದು ಅಳಿಲುಗಳು. ಚಿತ್ತಿ ಬಲು ಜಾಣೆ. ಆದೇ ಭಿತ್ತಿ ಗಂಡಾದರೂ ಮೊದ್ದುಮೊದ್ದು.

ಚಿತ್ತಿಯೇ ಹಣ್ಣುಕಾಯಿಗಳನ್ನು ಹುಡುಕಿ ತರಲು ಮರಗಿಡಗಳನ್ನು ಹತ್ತಿ ಇಳಿದು ಬರಬೇಕು. ಭಿತ್ತಿ ಎಳೆ ಬಿಸಿಲಿಗೆ ಮೈಯೊಡ್ಡಿ ಮನೆ ಮಾಡಿನ ಮೇಲೋ, ಪ್ರಾಕಾರದ ಗೋಡೆಯ ಮೇಲೋ, ಅಥವಾ ಮರಗಳ ಮೇಲೋ ಕುಳಿತಿರುತಿತ್ತು. ಚಿತ್ತಿ ಹಣ್ಣು ಕಾಯಿಗಳನ್ನು ಕಿತ್ತು ತಂದು ಕೊಟ್ಟರೆ ಆನಂದದಿಂದ ಕಚ್ಚಿ ಕಚ್ಚಿ ಅಗಿದು ತಿಂದು ನಿದ್ದೆ ಹೋಗುತಿತ್ತು.

ಒಮ್ಮೆ ಚಿತ್ತಿಗೆ ಸಿಟ್ಟು ಬಂದು ತಾನೇ ಹಣ್ಣುಗಳನ್ನು ತಿಂದು ಬರಿಗೈಯಲ್ಲಿ ಮನೆಗೆ ಬಂತು. ಭಿತ್ತಿ ಹೆಂಡತಿಯ ಕೈಕಡೆಗೆ ನೋಡಿತು, ನೋಡಿಯೇ ನೋಡಿತು. ಒಡಲೆಲ್ಲಾ ಸಂಕಟ ಮಾತ್ರವಲ್ಲ, ಸಿಟ್ಟು ನೆತ್ತಿಗೇರಿತು!

'ನನಗೆಲ್ಲಿ ಹಣ್ಣು?' ಅಬ್ಬರಿಸಿತು ಭಿತ್ತಿ.

'ಈ ದಿನ ಹಣ್ಣು ಸಿಗಲಿಲ್ಲ ಗೊತ್ತಾ? ನನಗೂ ಹೊಟ್ಟೆ ತುಂಬಾ ಹಸಿವು.'

‘ಓಹೋಹೋ! ಎಲ್ಲಾ ಸುಳ್ಳು!’

‘ನಿಜವಾಗಿಯೂ ಸಿಕ್ಕಿಲ್ಲ ಭಿತ್ತಿ!’

‘ಓ! ತಿಂದೂ ತಿಂದೂ ಹೊಟ್ಟೆ ಡೊಳ್ಳಾಗಿ ಬಂದಿದ್ದೀ! ಸುಳ್ಳು ಹೇಳುವುದು ಬೇರೆ.’

‘ನಿನಗೇನು? ದಿನಾ ಇದ್ದಲ್ಲೇ ಇದ್ದು ಮಜ ಮಾಡುತ್ತಿ! ನೀನೇ ಮರ ಹತ್ತಿ ನೋಡು ತಿಳಿಯುತ್ತೆ!’

‘ನನಗೆ ವಯಸ್ಸಾಯಿತು ತಿಳಿಯಿತೇ? ನಿನಗಿಂತ ನಾಲ್ಕು ದಿನ ಮುಂಚೆಯೇ ಹುಟ್ಟಿದವ, ನೀನು ಇಷ್ಟೂ ಸಹಕಾರ ತೋರದಿದ್ದರೆ!’

‘ನಾಲ್ಕು ದಿನ ಮುಂಚೆ ಹುಟ್ಟಿದರೆ ಹೆಚ್ಚು ವಯಸ್ಸಾಗಲಿಲ್ಲ ಬಿಡು. ಅದನ್ನೇ ದೊಡ್ಡದು ಮಾಡಿ ಸಿಟ್ಟುಗೊಳ್ಳುತ್ತಿ. ಈ ಗಂಡು ಜಾತಿಯೇ ಹಾಗೆ. ಸದಾ ರಾಜ ವೈಭವ ಇರಬೇಕು!’

‘ಗಂಡು ಅಂದಮೇಲೆ ಇರಬೇಡವೇ?’

‘ಇರಬೇಕು-ಇರಬೇಕು! ನೀನು ಕುಳಿತು ಮಜಮಾಡು!’

ಚಿತ್ತಿ ಸಿಟ್ಟಿನಿಂದ ಇನ್ನೊಂದು ಮರ ಏರಿತು.

ಅದರಲ್ಲಿ ಒಂದೇ ಒಂದು ಪನ್ನೇರಿಳೆ ಹಣ್ಣು ದೊರೆಯಿತು. ಅದನ್ನು ಒಯ್ದು ಕೊಡೋಣವೆಂದರೆ ಇದೇ ಮೊದಲಾಗಿ ಒಂದು ಪನ್ನೇರಿಳೆ ಹಣ್ಣು ದೊರೆತಿದೆ! ಅದು ಎಂತಹ ರುಚಿ ಕೂಡಾ! ಕಷ್ಟಪಟ್ಟು ಕಿತ್ತ ನಾನು ತಿನ್ನ ಕೂಡದೇ? ಉಹೂ....ಇದನ್ನು ಮಾತ್ರ ಕೊಡುವವಳಲ್ಲ. ನಾನು ತಿನ್ನಲೇಬೇಕು!’ ಎಂದುಕೊಂಡ ಚಿತ್ತಿ ಸ್ವಲ್ಪ ಸ್ವಲ್ಪವಾಗಿ ಕರಂ ಕರಂ ಅಗಿದು ಕಚ್ಚಿ ತಿಂದೇ ಬಿಟ್ಟಿತು!

ಭಿತ್ತಿಗೆ ಈ ಸಲಿ ಏನಾದರೂ ತಂದೇ ತರುತ್ತಾಳೆ ಎಂಬ ನಂಬಿಕೆ. ಮಡದಿ ಹಿಂದಿರುಗುವುದನ್ನೇ ಕಾಯುತಿತ್ತು. ಚಿತ್ತಿ ಚಕ ಚಕ ಇಳಿದು ಬಂದು ಹೇಳಿತು. 'ಅದರಲ್ಲಿ ಒಂದೇ ಚಿಕ್ಕ ಪನ್ನೇರಿಳೆ ಹಣ್ಣು ಇತ್ತು. ಅದು ನನಗೇ ಸಾಕಾಗುವಂತಿರಲಿಲ್ಲ. ನಾನೇ ತಿಂದುಬಿಟ್ಟೆ!'

'ನೀನು ಎಷ್ಟು ಕೆಟ್ಟವಳಿದ್ದಿ!'

'ನನ್ನ ವಿಚಾರವಿರಲಿ! ನೀನು ಒಂದಿನವಾದರೂ ತಂದು ಕೊಟ್ಟಿದ್ದೀಯಾ? ನಾನೇ ಯಾವಾಗಲೂ ಏಕೆ ತಂದು ಕೊಡಬೇಕು?'

'ನೀನು ಹೆಂಡತಿ! ನಾನು ಗಂಡ!'

'ನೀನು ಗಂಡಾದರೇನು? ನೀನು ನನ್ನನ್ನು ಸಾಕಿಲ್ಲವಷ್ಟೆ?'

ಆ ಮಾತಿಗೆ ನೆತ್ತಿ ಉರಿಯಿತು ಭಿತ್ತಿಗೆ. ಚಿತ್ತಿಗೆ ರಪರಪ ಬಡಿದು ಹಲ್ಲಿನಿಂದ ಕಚ್ಚಿ ಗಾಯಗೊಳಿಸಿತು. ಆಗ ಚಿತ್ತಿಗೆ ಉಂಟಾದ ಕೋಪ-ತಾಪ ಏನೆಂದು ಹೇಳೋಣ?

'ಭಿತ್ತಿ ಮೇಲೆ-ಗಂಡನ ಮೇಲೆ ಟೂ ಟೂ! ನಿನ್ನ ಛಾಳಿ ಬಿಟ್ಟೆ ಟೂ ಟೂ! ನಿನ್ನ ಬಾಳು ಬಿಟ್ಟೆ ಟೂ ಟೂ!! ಎಂದು ಮತ್ತೆ ಮತ್ತೆ ಪೀಂ ಪೀಂ ಎಂದು ಕೂಗಿ ಬಾಲ ಎತ್ತಿಕೊಂಡು ಪನ್ನೇರಿಳೆ ಮರ ಏರಿತು ಚಿತ್ತಿ

ಆಗ ಭಿತ್ತಿಯ ಮುಖ ನೋಡಬೇಕೆ? ದುಃಖ-ಸಿಟ್ಟು ಎರಡೂ ಒಟ್ಟಿಗೆ ಮೂಡಿದುವು. ಹಿಂದೆಯೇ ಪನ್ನೇರಿಳೆ ಮರ ಏರಿ ಹೋಗಿ ಕರೆಯಿತು 'ಬಾ ಚಿತ್ತೀ ನಿನ್ನ ಇನ್ನು ಹೊಡೆಯುವುದಿಲ್ಲ!'

'ನೀನು ಬೇಡ ಹೋಗು! ನಿನಗಿಂತ ಒಳ್ಳೆ ಗಂಡ ಬರುತ್ತಾನೆ ನನಗೆ!'

'ನಾನೇ ಒಳ್ಳೆ ಗಂಡ ಆಗ್ತೀನಿ ಗೊತ್ತಾ?'

'ಬೇಡ ಮಹರಾಯಾ!'

'ದಮ್ಮಯ್ಯಾ ಅಂತೀನಿ!'

'ನಿನ್ನ ಹೊಸ ಹೆಂಡತಿಗೆ ಅಂದುಕೊ.'

ಚಿತ್ತಿ ತಿರುಗಿ ನೋಡದೆ ಮರದಿಂದ ಮರಕ್ಕೆ ದಾಟಿ ದೂರ-ಕಣ್ಣಿಗೆ ಕಾಣದಷ್ಟು ದೂರ ಹೊರಟು ಹೋಯಿತು. ಭಿತ್ತಿ ಜೋಲು ಮುಖ ಹಾಕಿಕೊಂಡು ಇಳಿದು ಬಂದು ಮೊದಲಿನ ಜಾಗದಲ್ಲೇ ಕುಳಿತು ಯಾರಾದರೂ ಹೊಸ ಹೆಂಡತಿ ಬರಬಹುದೆಂದು ಕಾಯುತಿತ್ತು ಅತ್ತಿತ್ತ ಕಣ್ಣು ಹೊರಳಿಸಿ ನೋಡುತ್ತ.

ಅತ್ತ ಒಂದಾದರೂ ಹೆಣ್ಣು ಅಳಿಲು ಸುಳಿಯಲಿಲ್ಲ.



# ಸಿಂಧನೂರಿನಲ್ಲಿ ಹಂದಿ

ಸಿಂಧನೂರು ಚಿಕ್ಕದಾದರೂ ಚೊಕ್ಕದಾದ ಊರು.

ಒಬ್ಬ ರೈತ ನಾಲ್ಕಾರು ಹಂದಿಗಳನ್ನು ಸಾಕಿದ್ದ. ಒಂದಾಗುತ್ತಲೂ ಒಂದನ್ನು ಕೊಂದು ಮಾರಿ ಹೊಟ್ಟೆ ತುಂಬಿಸಿಕೊಳ್ಳುತ್ತಿದ್ದ. ಒಡೆಯ ಕೊಂಡು ಹೋದ ಹಂದಿ ಹಿಂದಿರುಗಿ ಬಾರದುದರಿಂದ ಅದು ಎಲ್ಲಿ ಹೋಯಿತು ಎಂಬುದನ್ನು ತಿಳಿಯದ ಹಿರಿಯ ಹಂದಿ ಊರೆಲ್ಲಾ ಓಡಾಡುತ್ತ ಹುಡುಕುತ್ತಿತ್ತು. ಎಲ್ಲಿಯೂ ಅದರ ಬಳಗ ಕಂಡು ಬರಲಿಲ್ಲ.

ಒಮ್ಮೆ ನಾಯಿಯನ್ನು ಕೇಳಿತು ಹಂದಿ 'ನನ್ನ ಜೊತೆಗಾತಿಯನ್ನು ನೋಡಿದೆಯಾ?'

'ಓ ಅದೇ? ಅಂದು ಯಜಮಾನ ಕೊಂದು ಸಾರು ಮಾಡಿದನಲ್ಲಾ! ಅಹ, ಅದೆಷ್ಟು ರುಚಿಯಾಗಿತ್ತು ಗೊತ್ತೆ? ಬಲೂ ರುಚಿ! ಬಲೂ ರುಚಿ!! ಈ ವಿಚಾರ ನಿನಗೆ ಗೊತ್ತೇ ಇರಲಿಲ್ಲವೇ?'

'ಇಲ್ಲಪ್ಪಾ! ನನಗೆ ಹೇಳಲೇ ಇಲ್ಲ ಒಡೆಯ....ನಮ್ಮವರೀಗ ಎಲ್ಲೂ ಕಾಣಿಸುತ್ತಿಲ್ಲ.'

'ಹಾಗಾದರೆ ನೀನೊಬ್ಬನೇ? ಉಳಿದಿದ್ದೀಯೇನು?'

'ಹೌದು ನನ್ನ ಗೂಡಿನಲ್ಲಿ ನಾನೊಬ್ಬನೇ! ಉಳಿದವರೆಲ್ಲಾ

ಇಲ್ಲವೇ ಇಲ್ಲ!'

'ಬಿಡು, ನಿನಗೂ ಒಂದಿನ ಚೂರಿ ಹಾಕುತ್ತಾನೆ!'

ಹಂದಿ ಆ ಮಾತಿಗೆ ಹೆದರಿ ಅಲ್ಲಿಂದ ಓಡಿತು. ಓಡಿ ಓಡಿ ಒಂದು ಶಾಲೆಯ ಹತ್ತಿರ ನಿಂತಿತು. ಹುಡುಗರೆಲ್ಲಾ ಶಾಲೆಗೆ ಹೋಗುತಿದ್ದರು.

'ಒಬ್ಬ ಹುಡುಗ 'ಹೇ, ಹಂದಿ! ನೀನೇಕೊ ಬಂದೀ?' ಎಂದ.

'ನಿನ್ನನ್ನು ನೋಡಲೆಂದೇ ಬಂದೇ.'

'ಏಕೆ?'

'ನನ್ನ ಜೊತೆಗಾರರಾರೂ ಇಲ್ಲ. ಒಬ್ಬನೇ ಬೇಸರವಾಗಿದೆ.'

'ಎಲ್ಲಿ ಹೋದರು ಎಲ್ಲಾ?'

'ಯಜಮಾನ ಚೂರಿ ಹಾಕಿದ.'

'ಹಂದಿ ಎಂದಮೇಲೆ ಹಾಗೆಯೇ!'

'ನನಗೆ ಹಂದಿ ಎಂಬ ಹೆಸರೇ ಬೇಡ. ನೀನು ಬೇರೆ ಏನಾದರೂ ಹೆಸರಿಡು.'

'ಯಾವ ಹೆಸರಿಡಲಿ!'

'ಯಾವುದಾದರೂ ಒಳ್ಳೆಯ ಹೆಸರು ಬೇಕು. ಹಂದಿ ಎಂದರೆ ಯಜಮಾನ ಚೂರಿ ಹಾಕುತ್ತಾನೆ! ಅದಕ್ಕಾಗಿ ಬೇರೆಯೇ ಹೆಸರಿದ್ದರೆ ಒಳ್ಳೆಯದು.'

'ಹಿಂಡಿ ಎಂದರೆ ಆದೀತೇ?'

'ಹಿಂಡಿ ಎಂದರೆ ಏನರ್ಥ?'

'ತೆಂಗಿನಕಾಯಿ ಎಣ್ಣೆ ತೆಗೆದ ಮೇಲೆ ಉಳಿಯುತ್ತಲ್ಲ, ಅದೇ ಹಿಂಡಿ!'

‘ಓ, ಅದೇ? ಸುವಾಸನೆ ಇರುತ್ತೆ!’

‘ಹೌದು, ಅದರ ಹೆಸರು ಹಿಂಡಿ!’

‘ಓ! ನನಗೆ ಅದೇ ಹೆಸರು ಇರಲಿ. ನಾನಿನ್ನು ಹಿಂಡಿ!’

ಹುಡುಗ ಫಕ ಫಕನೆ ಬಾಯಿ ತುಂಬಾ ನಕ್ಕ. ಆದರೂ, ಹಂದಿಗೆ ತುಂಬಾ ಸಡಗರ-ಸಂತೋಷ. ನಗರದ ಹೊರವಲಯದಲ್ಲಿ ಸುತ್ತಾಡಿ ಅಡ್ಡಾಡಿ ಹೊಟ್ಟೆ ತುಂಬಿಸಿಕೊಂಡನಂತರವೇ ತನ್ನ ಗೂಡಿನ ಯೋಚನೆ. ಅಲ್ಲಿಯವರೆಗೆ ಮರೆತು ಹೋಗಿದ್ದ ತಮ್ಮವರ ಜ್ಞಾಪಕ ಮರುಕಳಿಸಿತು ಮನದಲ್ಲಿ. ಆಗ ತುಂಬ ಬೇಸರದಿಂದ ಗೂಡಿನ ಜಾಡು ಹಿಡಿದು ಹೊರಟಿತು ಹಂದಿ.

ಐದಾರು ಮಂದಿ ಸಹಪಾಟಿಯರು ಮತ್ತು ಮರಿಗಳು ಅನ್ಯಾಯವಾಗಿ ಕೈಬಿಟ್ಟು ಹೋದರು ಗೂಡಿನಲ್ಲಿ ರಾತ್ರಿಯೆಲ್ಲಾ ಒಬ್ಬನೇ ಕಳೆಯಬೇಕು ಎಂಬ ಯೋಚನೆಯೊಂದಿಗೆ ಗೂಡು ಸೇರಿತು.

ಬೆಳಿಗ್ಗೆ ಯಜಮಾನ ಬಂದ. ಕೈಯಲ್ಲಿ ದಪ್ಪ ಹಗ್ಗ-ಕಡುಗೋಲು ಇತ್ತು. ಅವನು ಒಳ ಬಂದವನೇ ಕದ ಮುಚ್ಚಿಕೊಂಡ. ಈ ಹಿಂದೆ ಇತರ ಹಂದಿಗಳನ್ನು ಕರೆದೊಯ್ಯುವಾಗಲೂ ಹೀಗೆಯೇ ಬಾಗಿಲು ಮುಚ್ಚಿಕೊಳ್ಳುತಿದ್ದುದು ನೆನಪಾಗಿ ಹಂದಿ ಗಡಗಡ ನಡುಗಿತು. ಅವನು ಉದ್ದನೆಯ ಹಗ್ಗಕ್ಕೆ ಕುಣಿಕೆ ಹಾಕಿ ಅದರ ಕೊರಳಿಗೆ ತೊಡಿಸಬಂದಾಗ ಅದು ಕೊಸರಾಡಿ ತಪ್ಪಿಸಿಕೊಳ್ಳಲು ಪ್ರಯತ್ನಿಸಿತು. ಆದರೂ ಅವನು ಬಿಟ್ಟಾನೆಯೇ? ಹಗ್ಗದಿಂದಲೇ ಬಾರಿಸಿ ಬಿಗಿದು, ಪಟ್ಟು

ಹಿಡಿದು ಹಗ್ಗ ತೊಡಿಸಿದ.

ಹಂದಿ ಕಿರ್ ಕಿರ್ ಕಿರ್‌ರ್‌ರ್‌ರ್ ಎಂದು ಅರಚಿಕೊಂಡಿತು.

'ಏಯ್! ಹಂದಿ ಸುಮ್ಮನಿರು!' ಎಂದು ಹಗ್ಗದ ತುದಿಯಿಂದ ಬಾರಿಸಿದ, ರೈತ.

'ಒಡೆಯಾ! ನಾನು ಹಂದಿಯಲ್ಲ, ಹಿಂಡಿ!'

ಅದರ ಮಾತನ್ನು ಕೇಳಿ ರೈತ ಹೆಹ್ಹೇಹ್ಹೇ ಎಂದು ನಕ್ಕುಬಿಟ್ಟ.

'ಏಕಷ್ಟು ತಾತ್ಸಾರ! ನನಗೀಗ ಹೊಸ ಹೆಸರು ಬಂದಿದೆ! ನಾನು ಹಂದಿಯಲ್ಲ.'

'ನೀನು ಹಿಂಡಿ ಎಂದು ಯಾರು ಹೇಳಿದರು?'

ಒಬ್ಬ ಶಾಲಾಬಾಲಕ. ಹಿಂಡಿ ಎಂದರೆ ಒಳ್ಳೆಯ ಹೆಸರು ಎಂದಿದ್ದಾನೆ!'

'ಹಂದಿಯಾದರೂ ಸರಿಯೇ; ಹಿಂಡಿಯಾದರೂ ಸರಿಯೆ; ಎರಡೂ ಉಪಯೋಗಕ್ಕೆ ಬರುತ್ತವೆ!' ಎನ್ನುತ್ತ ರೈತ ಅದನ್ನು ದರದರನೆ ಎಳೆದೊಯ್ದ.

ಹಂದಿ ಕಿರ್ರನೆ ಕಿರುಚುತ್ತಲೇ ಇತ್ತು.

ಪರಂಪರೆಯ ಅಡಿಗಲ್ಲು
ದಿವ್ಯ ಜ್ಞಾನಕೆ ಮುಳ್ಳು
ನವೋದಯದ ಕಾಂತಿ
ನವ್ಯ ಜ್ಞಾನದ ಕ್ರಾಂತಿ



## ಚಾಂಗ್-ಚುನ್

ಚೀನಾ ದೇಶದಲ್ಲಿ ಚುಂಗ್-ಚಾಂಗ್ ಎಂಬ ರೈತನಿದ್ದ. ಅವನಿಗೊಬ್ಬ ಮಗನಿದ್ದ. ಅವನ ಹೆಸರು ಚಾಂಗ್-ಚುನ್. ಅವನು ದೂರದ ಶಾಲೆಗೆ ನಡೆದುಕೊಂಡೇ ಹೋಗುತಿದ್ದ. ಧನಿಕರ ಮಕ್ಕಳು ಬಸ್ಸು ಕಾರುಗಳಲ್ಲಿ ಬರುವುದನ್ನು ನೋಡಿದರೆ ಇವನಿಗೂ ಬಸ್ಸಿನಲ್ಲಿ ಹೋಗುವ ಆಸೆ. ಆದರೆ, ಅಪ್ಪ ಕಾಸು ಬಿಚ್ಚುವವನಲ್ಲ. ಅವನು ಅಂತಹ ಬಡವನೇನಲ್ಲ. ತುಂಬಾ ಜುಗ್ಗ. ಕಾಸು ಕಾಸುಗಳನ್ನೂ ಕೂಡಿ ಜೇಬಿಗೆ ತುರುಕುವುದೊಂದೇ ಗೊತ್ತು. ಮಡದಿ ಮಕ್ಕಳಿಗೆ ಬಿಡುವು ದೊರೆಯದಷ್ಟು ದುಡಿಸುತಿದ್ದ. ಹರಿದ ಚಿಂದಿಯಲ್ಲೇ ದಿನಗಳಯುತಿತ್ತು ಬಡ ಸಂಸಾರ.

ಚುಂಗ್-ಚಾಂಗ್ ಗಳಿಸಿದ ಹಣವನ್ನೆಲ್ಲಾ ಒಂದು ಪೆಟ್ಟಿಗೆಯಲ್ಲಿ ತುಂಬಿಡುತಿದ್ದ. ಹಣವೆಣಿಸುವಾಗಲೆಲ್ಲ ಅವನು ಬಾಗಿಲು ಮುಚ್ಚಿಕೊಳ್ಳುತಿದ್ದುದರಿಂದ ಹಣ ಎಷ್ಟಿದೆ ಎಂಬುದು ತಿಳಿಯದಿದ್ದರೂ ಪೆಟ್ಟಿಗೆಯ ತುಂಬಾ ಇದೆ ಎಂಬುದು ಗೊತ್ತು, ಮಡದಿ ಮಕ್ಕಳಿಗೆ.

ಮಾಗಿಕಾಲ ಬಂದಿತು. ಎಲ್ಲರಿಗೂ ಉಣ್ಣೆ ಬಟ್ಟೆಗಳ ಅವಶ್ಯಕತೆ ಬಹಳ. ಆದರೂ ಚುಂಗ್-ಚಾಂಗ್ ಕಾಸು

ಬಿಚ್ಚುವವನಲ್ಲ. ಮಡದಿ ಹಳೆಯ ಬಟ್ಟೆಗಳನ್ನು ಒಂದುಗೂಡಿಸಿ ದಳಿಗೆ ಹಾಕಿ ದಪ್ಪನೆಯ ಮೇಲಂಗಿ ತಯಾರಿಸಿದಳು. ಚಾಂಗ್-ಚುನ್ ಅದನ್ನೇ ಧರಿಸಿಕೊಂಡು ಶಾಲೆಗೆ ಹೋದ. ಜೊತೆಗಾರರಿಗೆ ಅವನನ್ನು ಕಂಡರೆ ಗೇಲಿ-ತಮಾಷೆ! ಹಿಹಿಹ್ಹೀ! ಹೂಹೂಹ್ಹೂ ಎಂದು ನಕ್ಕರು.

'ಇಷ್ಟು ಹಾಸ್ಯ ಮಾಡುವ ನೀವೇ ಒಂದು ಉಣ್ಣೆಯ ಅಂಗಿ ಕೊಡಬಾರದೇ?'

'ನಿನ್ನಪ್ಪನ ಬಳಿ ಬೇಕಾದಷ್ಟು ದುಡ್ಡಿದೆ. ಅವನ ಜಿಪುಣತನ ನಿನ್ನನ್ನು ಬಡತನಕ್ಕಿಳಿಸಿದೆ!'

ಚಾಂಗ್-ಚುನ್ ಮಾತಾಡಲಿಲ್ಲ. ಮನಸ್ಸು ಮುದುಡಿತು. ಮನೆಗೆ ಹಿಂದಿರುಗಿದ ನಂತರ ತಂದೆಯನ್ನು ಕೇಳಿದ 'ಶಾಲೆಗೆ ಚಿಂದಿ ತೊಟ್ಟು ಹೋದರೆ ಎಲ್ಲರೂ ನಕ್ಕು ಹೀಯಾಳಿಸುತ್ತಾರೆ. ನನಗೊಂದು ಉಣ್ಣೆಯ ಅಂಗಿ ಬೇಕು ಅಪ್ಪಾ!'

'ಉಣ್ಣೆಯ ಬಟ್ಟೆಗಳಿಗೆ ಸಾಮಾನ್ಯ ಬೆಲೆಯೇ ನಮ್ಮಂತಹ ಬಡವರು ಅವನ್ನೆಲ್ಲಾ ಬಯಸಲೇ ಬಾರದು.'

'ಅಪ್ಪ....!'

'ಹೋಗು! ಹೋಗು! ಇನ್ನು ಸೊಲ್ಲೆತ್ತಬೇಡ.'

ಚುಂಗ್-ಚಾಂಗ್ ದೊಡ್ಡ ದನಿಯಲ್ಲಿ ಗದರಿಕೊಂಡ. ಒಳಗಡೆಯಿಂದ ಇವರ ಮಾತುಕತೆಯನ್ನು ಕೇಳಿಸಿಕೊಂಡ ಮಡದಿ ನುಡಿದಳು 'ಇದ್ದ ಹಣದಲ್ಲೇ ಒಂದೊಂದು ಕೊಳ್ಳಬಹುದು. ಕೈ ತುಂಬ ದುಡಿದು ಇಂತಹ ಪಾಡು ಪಡಬೇಕೆ? ಪೆಟ್ಟಿಗೆ ತುಂಬ ಹಣವಿದ್ದು ಏನು

ಪ್ರಯೋಜನ?'

ಆ ಮಾತಿಗೆ ಚುಂಗ್-ಚಾಂಗ್ ರೇಜಿಗೆದ್ದು ಕೆಂಗಣ್ಣು ಮಾಡಿಕೊಂಡು ಕೆಟ್ಟ ಮಾತುಗಳನ್ನಾಡಿದ.

'ನೀನು ಸುಮ್ಮನೆ ರೇಜಿಗೇಳುತ್ತಿ. ನಮ್ಮ ದುಡಿಮೆ ಸುಖ ಜೀವನ ಕೊಡಲು ಸಾಕು. ನಿನ್ನದು ಬರೀ ಪಿಸುಣಿತನ, ನಮಗೆ ಗೋಳು!' ಹೇಳಲಾರದೆ ಹೇಳಿದಳು ವೀ-ಚಿನ್.

ಚುಂಗ್-ಚಾಂಗ್ ಅವಳ ಕಷ್ಟವನ್ನು ಅರಿತುಕೊಳ್ಳಲಿಲ್ಲ. ಕೋಪ ಕುದಿಯಿತು. ಪಟ್ ಪಟ್ಟನೆ ನಾಲ್ಕಾರು ಏಟು ಬಿಗಿದು ಹೊರ ಹೋದ. ಎದುರಿಗಿದ್ದ ಚಾಂಗ್-ಚುನ್ ತುಂಬ ನೊಂದು ನೀರಾದ. ನನ್ನಿಂದಾಗಿ ತಾಯಿಗೆ ಏಟು ಬಿತ್ತು ಎಂದುಕೊಂಡು ಅಳುತ್ತ ತಾಯಿಯನ್ನು ಸಂತೈಸಿದ.

ತಾಯಿ-ಮಗ ಅಳುವಷ್ಟು ಹೊತ್ತು ಅತ್ತು ಸುಮ್ಮನಾದರು.

ಮಧ್ಯರಾತ್ರಿ.

ಎಲ್ಲರೂ ಮಲಗಿ ನಿದ್ದೆ ಹತ್ತಿದ ಸ್ವಲ್ಪ ಹೊತ್ತಿನಲ್ಲೇ ಒಳಗಡೆ ಏನೋ ಸದ್ದು! ಚುಂಗ್-ಚಾಂಗ್ ಎಚ್ಚರಗೊಂಡು ಆಲೈಸಿದ. ಯಾರೋ ಓಡಾಡಿದ ಸದ್ದು! ಮಡದಿ ಮಕ್ಕಳ ಕಡೆ ನೋಡಿದರೆ ಎಲ್ಲರೂ ನಿದ್ದೆ ಮಾಡುತಿದ್ದಾರೆ. ಸ್ವಲ್ಪ ಹೊತ್ತು ಆಲೈಸಿದ. ಸದ್ದು ಕೇಳಿಸುತ್ತಲೇ ಇದೆ. ಮಸುಗತ್ತಲೆಯಲ್ಲಿ ಏನೂ ಕಾಣಿಸದು. ಅವನು ನೋಡುತ್ತಿರುವಂತೆಯೇ ಯಾರೋ ಗುಸು ಗುಸು ಪಿಸು ಪಿಸು ಎನ್ನುತ್ತ ಮುಂದೆ ಬಂದೇ ಬಿಟ್ಟರು!

‘ಏಳಿ! ಏಳಿ! ಕಳ್ಳರು ಬಂದಿದ್ದಾರೆ!’ ಚುಂಗ್-ಚಾಂಗ್ ಕೂಗಿದ. ಎಲ್ಲರೂ ದಡಬಡಿಸಿ ಏಳುವುದರೊಳಗಾಗಿ ಚುಂಗ್-ಚಾಂಗ್ ಸೌದೆಯನ್ನು ತೆಗೆದುಕೊಂಡರೂ ಕಳ್ಳರು ಸುಮ್ಮನಿದ್ದಾರೆಯೇ! ಇವನನ್ನೇ ಬಡಿದು ಹಗ್ಗದಿಂದ ಕಟ್ಟಿ ಉರುಳಿಸಿದರು.

ಕಳ್ಳರು ಪೆಟ್ಟಿಗೆ ಒಡೆದರು! ವಾರ್‍ಥವಾ! ಎಷ್ಟೊಂದು ಹಣ!

ಚಾಂಗ್-ಚುನ್ ಮತ್ತು ವೀ-ಚಿನ್ ಹಣವನ್ನು ಬೆಕ್ಕಸ ಬೆರಗುಗೊಂಡು ನೋಡಿದರು.

ಚುಂಗ್-ಚಾಂಗ್ ಮಡದಿ ಮಕ್ಕಳಿಗೆ ದೊಡ್ಡ ದನಿಯಲ್ಲಿ ಹೇಳಿದ ‘ಬಡಿಗೆಯಿಂದ ಬಡಿಯಬ಼ಾರದೆ! ಸುಮ್ಮನೆ ಇದ್ದೀರಲ್ಲ?’

ಚಾಂಗ್-ಚುನ್ ಹೇಳಿದ ‘ಈಗ ಸುಮ್ಮನಿರಪ್ಪಾ! ಸದ್ಯ ಜೀವ ಉಳಿಯಲಿ!’

ಕಳ್ಳರು ದುಡ್ಡೆಲ್ಲವನ್ನೂ ಚೀಲಕ್ಕೆ ತುಂಬುತಿದ್ದಂತೆ ವೀ-ಚಿನ್ ಬೇಡಿಕೊಂಡಳು.

‘ಅಯ್ಯಾ, ದೊರೆಗಳೇ! ನಾವು ಕಷ್ಟಪಟ್ಟು ದುಡಿದವರು. ನಮಗಾಗಿ ಸ್ವಲ್ಪ ಉಳಿಸಿ ಹೋಗಿ!’

ಚುಂಗ್-ಚಾಂಗ್ ಬಿದ್ದಲ್ಲೇ ದೊಡ್ಡಬಾಯಿ ತೆಗೆದು ಅಳುತಿದ್ದ.

ಚಾಂಗ್-ಚುನ್ ನಿಶ್ಚಿಂತೆಯಿಂದ ನುಡಿದ ‘ದೇವರಿಗೆ ಒಪ್ಪಿಸಿದೆ ಎಂದು ತಿಳಿದುಕೊ ಅಪ್ಪಾ! ಇನ್ನೇಕೆ ಅಳುತ್ತಿ?’

‘ಅದು ಸರಿ! ಅದು ಸರಿ!!’ ಕಳ್ಳರು ಕೂಗಿ ಹೇಳಿ ಕೇಕೆ ಹಾಕಿ

ನಗುತ್ತ ಹೊರಟು ಹೋದರು.

ವಿದ್ಯೆ ಬುದ್ಧಿಗಳನು
ಚೆಂದದಿಂದ ಕಲಿತು
ಮುಂದೆ ಮುಂದೆ ನಡೆಯೆ
ನೇರ ಮಾರ್ಗ ಹಿಡಿದು,
ತುತ್ತ ತುದಿಯ ದೂರ
ದೂರ ಗಮ್ಯ ಸ್ಥಾನ
ಕಾಣದೆ ಬಗೆಗಣ್ಣಿಗೆ?



# ಮಂಡರಾಜ

ಸುಂಡೆಕೆರೆಯಲ್ಲಿ ವಾಸವಾಗಿತ್ತು, ಮಂಡರಾಜ ಎಂಬ ಮಂಡರಗಪ್ಪೆ.

ಅದು ಕೆರೆ ಪ್ರದೇಶವನ್ನು ದಾಟಿಯೇ ಇರಲಿಲ್ಲ. ಇದ್ದಲ್ಲೇ ಇದ್ದು ತಿಂದೂ ತಿಂದೂ ಚೆನ್ನಾಗಿ ಬೆಳೆದಿದ್ದ ಮೈ. ಬಲು ಗಾತ್ರದ ಹೊಟ್ಟೆ. ಅಲ್ಲಾಡುವುದೂ ಕಷ್ಟವೇ ಅದಕ್ಕೆ. ಹುಳು ಹುಪ್ಪಟೆಗಳು ಕೆರೆಯಲ್ಲಿ ಹೇರಳವಾಗಿದ್ದುದರಿಂದ ಕುಳಿತಲ್ಲೇ ಚೊಕ್ಕವಾದ ಭೋಜನ ದೊರೆಯುತಿತ್ತು. ಮಂಡರಾಜನಿಗೆ ಸದಾ ಆರಾಮವೇ. ಕೆಲಸದ ಗೋಜು ಏನೇನೂ ಇರಲಿಲ್ಲ.

ಕೆಲವೊಮ್ಮೆ ಇದ್ದಲ್ಲೇ ಆಹಾರ ದೊರೆಯದಿದ್ದರೆ ಇತರ ಕಪ್ಪೆಗಳಿಗೆ ಆಹಾರ ತರಲು ಅಪ್ಪಣೆ ಮಾಡುತಿತ್ತು ಮಂಡರಾಜ. ಅವು ತಂದು ತಂದು ರಾಶಿ ಹಾಕುತಿದ್ದುವು. ಇದು ಇದ್ದಲ್ಲೇ ತಿಂದು ಮೈಯ್ಯೂ ಭಾರ. ಹೊಟ್ಟೆಯೂ ಭಾರ.

ಸುಂಡೆಕೆರೆ ಚಿಕ್ಕ ಕೆರೆಯಾದರೂ ಬೇಸಗೆಯಲ್ಲಿ ನೀರು ಬತ್ತುತ್ತಿರಲಿಲ್ಲ. ಊರ ಜನರು ಬೇಸಗೆಯಲ್ಲಿ ನೀರಿಗಾಗಿ ಬರುತ್ತಿದ್ದರು ಕೆರೆಗೆ. ಅವರು ನೀರು ತುಂಬುತಿದ್ದರೆ ಕಪ್ಪೆಗೆ ಕಿರಿ ಕಿರಿ. ನೀರು ಖಾಲಿಯಾದರೆ ನಮ್ಮ ಗತಿಯೇನು ಎಂಬ

ಚಿಂತೆ.

ಒಮ್ಮೆ ನಾಲ್ಕು ಮಂದಿ ಹೆಂಗಸರು ನೀರಿಗೆ ಬಂದಿದ್ದಾರೆ. ನಾಲ್ಕು ಕೊಡಗಳು ಥಳಥಳಿಸುತ್ತಿವೆ. ಅವರು ಮೆಟ್ಟಲಿನ ಮೇಲೆ ಕೊಡಗಳನ್ನು ಸಾಲಾಗಿ ಇಟ್ಟರು. ಬಾಯಿ ತುಂಬ ಮಾತಾಡುತ್ತ ಕೈಕಾಲು ಮಜ್ಜನ ಮಾಡಹತ್ತಿದರು.

ಮಂಡರಾಜ ಅವರನ್ನೆ ಕೆಕ್ಕರಿಸಿ ನೋಡುತ್ತ ವಟರ್ ರ್ ರ್ ರ್ ರ್! ವಟರ್ ರ್ ರ್ ರ್! ಎಂದಿತು ದೊಡ್ಡ ದನಿಯಲ್ಲಿ.

ಒಬ್ಬಾಕೆ ನೀರು ತೋಡುತ್ತ 'ಈ ಮಂಡರ ಕಪ್ಪೆ ನೋಡು! ಎಷ್ಟು ಬೆಳೆದಿದೆ! ಅಮ್ಮಮ್ಮಾ!! ಇಂಥಾ ಕಪ್ಪೆ ನಾನೆಲ್ಲಿಯೂ ನೋಡಿಯೇ ಇಲ್ಲ!' ಎಂದಳು ಆಶ್ಚರ್ಯದಿಂದ.

'ಹೌದು ಕಣೆ! ಭಾರಿ ಕಪ್ಪೆ!'

ಆಗ ಕಪ್ಪೆಗೆ ಹೆಮ್ಮೆಯಾಯಿತು. ಅವರನ್ನೇ ನೋಡುತ್ತ 'ನಾನು ಮಂಡರಾಜ! ಈ ಕೆರೆಗೆ ಒಡೆಯ! ನೀವು ಹೀಗೆ ಸದಾ ನೀರೆತ್ತಲು ಬರಬಾರದು ಇದು ನನ್ನ ಅಪ್ಪಣೆ!' ಎಂದಿತು.

ಕೂಡಲೆ ಹೆಂಗಳೆಯರು ಕಿಲಕಿಲ ನಗತೊಡಗಿದರು.

ಮಂಡರಾಜನಿಗೆ ಸಿಟ್ಟು ಬಂದು ವಟರ್ ರ್ ರ್ ರ್ ರ್! ವಟರ್ ರ್ ರ್ ರ್ ರ್! ಎಂದ.

ಅವರು ಪುನಃ ಗೊಳ್ಳನೆ ನಕ್ಕು ಬಿಟ್ಟರು.

ಅದೇ ವೇಳೆಗೆ ಕೆಲವು ಹುಡುಗರು ಓಡೋಡಿ ಬಂದರು. ಹುಡುಗರ ಮಾತಿನ ರವ ನಗೆಯ ಸೊಲ್ಲು ಕೇಳಿ ಬರುತ್ತಲೂ ಮಂಡರಗಪ್ಪೆ ಗುಳುಂವನೆ ನೀರೊಳಗೆ ಮುಳುಗಿ ಮಾಯವಾಯಿತು!

'ನೋಡಿದೆಯಾ ನಮಗೆ ಜೋರು ಮಾಡಿದ ಮಂಡರಾಜ ಹುಡುಗರನ್ನು ನೋಡಿದೊಡನೆ ಗುಳುಂ ಎಂದು ಮುಳುಗಿತು!'

'ನಾವಾದರೆ ಸುಮ್ಮನಿದ್ದೇವು! ಹುಡುಗರು ಕಲ್ಲು ಒಗೆಯುತ್ತಾರೆ!'

'ನಿಜ....ನಿಜ!'

ಹುಡುಗರು ಹಿಹ್ಹಿಹ್ಹೀ! ಎಂದು ನಕ್ಕುಬಿಟ್ಟರು.

ಮಂಡರಾಜ ಮುಳುಗಿದೆಡೆಯಿಂದ ಗುಳುಗುಳನೆ ಗುಳ್ಳೆಗಳು ಮೇಲೆದ್ದುವು.

ಕೇಳಿರೋ ಕೇಳಿ!
ಬಿಜ್ಜೆ ಕಲಿಯದೆ
ಮಾನವೀಯತೆ
ಅರಿತುಕೊಳ್ಳದೆ
ನಗೆಗೀಡಾದರೆ
ಭಾರತಮಾತೆಯ
ಮಾನವೇ ನಷ್ಟ!
ವೇದ ಸಂಸ್ಕೃತಿ
ಜಾನವೇ ನಷ್ಟ!



## ಕೆಂಬೂತ

ಕೆಂಬೂತ ಕೆಂದು ಬಣ್ಣದ ಸುಂದರವಾದ ಪಕ್ಷಿ.

ಅದರ ವಾಸಕ್ಕೆ ಮನೆಯಿರಲಿಲ್ಲ. ಕಾಡಿನಲ್ಲಿ ಹೆಮ್ಮರಗಳಿಗಾಗಿ ಹುಡುಕುತಿತ್ತು. ನೇರಳೆ ಹಣ್ಣು ತಿನ್ನುತ್ತಿರುವಾಗ ಅದರ ಕಾಂಡದಲ್ಲಿ ಪೊಟರೆಯೊಂದು ಕಾಣಬಂತು. ಬಾಯಿ ಚಿಕ್ಕದಿದ್ದುದರಿಂದ ಒಳ ಹೋಗುವಂತಿರಲಿಲ್ಲ. ಒಳಗೆ ಹಣಿಕಿ ನೋಡಿತು, ಏನೂ ಕಾಣಿಸಲಿಲ್ಲ. ಕೆಂಬೂತಕ್ಕೆ ಸ್ಥಳ ಮೆಚ್ಚಿಗೆಯಾಯಿತು. ಅದರ ಬಾಯಿ ದೊಡ್ಡದು ಮಾಡುವ ಕಾರ್ಯ ತನ್ನಿಂದಾಗದು. ಯುಕ್ತಿಯಿಂದ ಸಾಧಿಸಬೇಕಾದ ಕಾರ್ಯ. ಅದಕ್ಕಾಗಿ ಅದೇ ಕಾಡಿನಲ್ಲಿ ವಾಸವಾಗಿದ್ದ ಮರಕುಟಿಕ ಹಕ್ಕಿಯ ಬಳಿಗೆ ಹೋಯಿತು.

'ನಮಸ್ಕಾರ ಅಣ್ಣಾ! ನಾನೂ ನೀನೂ ತುಂಬಾ ಗೆಳೆಯರಾಗೋಣವೇ!' ಎಂದಿತು ಕೆಂಬೂತ.

'ಆಗಲಿ ಗೆಳೆಯಾ! ಸ್ನೇಹ ಇದ್ದರೆ ಯಾರಿಗೆ ಬೇಡ!' ನುಡಿಯಿತು ಮರಕುಟಿಗ.

'ಇಲ್ಲೊಂದು ನೇರಳೆ ಮರದಲ್ಲಿ ಕಳಿತ ಹಣ್ಣುಗಳಿವೆ. ಇಬ್ಬರೂ ಹೋಗೋಣವೇ!'

'ಆಗಲಿ.'

ಎರಡೂ ಪುರ್ರನೆ ಹಾರಿ ಆ ಮರಕ್ಕೆ ಹೋದುವು. ಹಣ್ಣು ತಿಂದಾದನಂತರ ಕೆಂಬೂತ ಆ ಪೊಟರೆಯನ್ನು ತೋರಿ 'ನೋಡು! ಪೊಟರೆ ದೊಡ್ಡದಿರುವಂತಿದೆ. ಬಾಯಿ ಚಿಕ್ಕದು. ನೀನು ಕೊಕ್ಕನ್ನು ಹರಿತಗೊಳಿಸುವೆಯಾದರೆ ಇದು ಸರಿಯಾದ ಸ್ಥಳ. ಅದರ ಬಾಯಿ ಕುಕ್ಕಿ ನೋಡು!'

ಮರಕುಟಿಗ ಅದನ್ನು ನೋಡಿತು. ಕೆಂಬೂತ ಹೇಳಿದ್ದು ಸತ್ಯ. ಅದರ ಒಳಗುಟ್ಟು ಮಾತ್ರ ಅರ್ಥವಾಗಲಿಲ್ಲ. ಅದರ ಬಾಯಿ ದೊಡ್ಡದು ಮಾಡಿಕೊಂಡರೆ ತಾನೇ ವಾಸ ಮಾಡಬಹುದು ಎಂಬ ಯೋಚನೆಯಿಂದ ಕೆಲಸ ಶುರು ಮಾಡಿತು.

ಟಕ. ಟಕ. ಟಕ. ಟಕ. ಕುಟುಕತೊಡಗಿದರೆ ಕೆಂಬೂತನಿಗೆ ಅದೆಷ್ಟು ಸಂತೋಷವೋ. ಕುಳಿತಲ್ಲೇ ರೆಕ್ಕೆ ಬಡಿದು 'ವಾರ್ಹೆವಾ! ಇನ್ನೇನು ಇಷ್ಟರಲ್ಲೇ ಪೊಟರೆ ತಯಾರಾಗುತ್ತೆ. ಇನ್ನು ನನ್ನ ವಾಸ ಇಲ್ಲೇ!' ಎಂದುಕೊಂಡಿತು.

ಮರಕುಟಕನಿಗೂ ಅಷ್ಟೇ ಸಂತೋಷ. ಇಂದಿನಿಂದ ನನ್ನ ವಾಸ ಇಲ್ಲೇ ಎಂದುಕೊಂಡಿತು ತನ್ನಲ್ಲೇ.

ಟಕ. ಟಕ. ಟಕ. ಟಕ. ಕುಟುಕುತ್ತಲೇ ಇತ್ತು ಮರುಕುಟಿಗ. ಸ್ವಲ್ಪಹೊತ್ತಿನಲ್ಲಿ ದೊಡ್ಡ ಚಕ್ಕೆಯೊಂದು ಕತ್ತರಿಸಿ ಹಾರಿ ಬಿತ್ತು. ಚಿಕ್ಕದಾಗಿದ್ದ ಬಾಯಿ ಒಂದೇ ಬಾರಿಗೆ ದೊಡ್ಡದಾಯಿತು!

ಮರಕುಟಿಗ ಮತ್ತು ಕೆಂಬೂತಗಳು ಸಂತಸದಿಂದ ಕ್ವಾ ಕ್ವಾ-ಕ್ರಾ, ಕ್ರಾ ಎಂದು ಕೂಗುತ್ತ ಒಳಗಡೆ ಹಣಿಕಿದಾಗಲೇ

ಅದರೊಳಗೆ ವಾಸಮಾಡುತಿದ್ದ ಏಳೆಂಟು ಉಡಗಳು ಹೊರ ತಲೆ ಹಾಕಿ ಹೇಳಿದುವು,

'ಮಿತ್ರರೇ! ನಿಮ್ಮಿಂದ ತುಂಬಾ ಉಪಕಾರವಾಯ್ತು. ನಾವಿಲ್ಲಿ ಬಹಳ ದಿನಗಳಿಂದ ಇದ್ದೇವೆ. ಪೊಟರೆಯ ಬಾಗಿಲು ಚಿಕ್ಕದಿದ್ದುದರಿಂದ ನಮಗೆ ಓಡಾಡುವುದು ತುಂಬ ಕಷ್ಟವಾಗಿತ್ತು. ನಿಮ್ಮ ಉಪಕಾರ ಮರೆಯಲಾರೆವು! ನಿಮಗೆ ನಮಸ್ಕಾರ!'

ಆಗ ಕೆಂಬೂತ ಮತ್ತು ಮರಕುಟಿಗಗಳಿಗೆ ಏನು ಹೇಳಬೇಕೋ ತೋರದೆ ಸುಮ್ಮನೆ ತಮ್ಮ ತಮ್ಮ ಸ್ಥಳಗಳಿಗೆ ಪೆಚ್ಚು ಮೋರೆಯಿಂದ ಹಿಂದಿರುಗಿದುವು.

ಮಕ್ಕಳ ಬಾಳು ಹಸನಾಗೆ
ಪೇಳಲೇನಾ ಸೌಭಾಗ್ಯವ
ಸತ್ ಸಂಪತ್ತು ಎನಲೇ
ವರ ಐಶ್ವರ್ಯ ಎನಲೇ
ಅನುಪಮ ಶಕ್ತಿ ಎನಲೇ
ಅನನ್ಯ ಶಾಂತಿ ಎನಲೇ
ಹೊತ್ತು ಹೆತ್ತವರಿಂಗೆ?



## ಸಂಚಿ-ಮಂಚಿ

ಸಂಚಿ-ಮಂಚಿ ಎರಡೂ ಬಿಳಿಯ ಬಾತುಗಳು.

ಕ್ವಾಕ್ ಕ್ವಾಕ್ ಕ್ವಾಕ್ ಎನ್ನುತ್ತಾ ತಮ್ಮ ಆಹಾರಕ್ಕಾಗಿ ಅಲೆದಾಡುತ್ತಿದ್ದುವು. ಹಿತ್ತಿಲಲ್ಲಿ ಅಂಗಳದಲ್ಲಿ ತಿಂಡಿಯೇನೋ ಸುಲಭವಾಗಿ ಸಿಕ್ಕುತ್ತಿತ್ತು. ಆದರೂ ಸ್ವಲ್ಪದೂರ ಊರಾಚೆಯವರೆಗೂ ಹೋಗಿ ನೋಡಿ ಬರಬೇಕೆಂಬ ಚಪಲ ಎರಡಕ್ಕೂ.

ಕ್ವಾಕ್ ಕ್ವಾಕ್ ಎನ್ನುತ್ತಲೇ ಪಯಣವನ್ನು ಬೆಳೆಸಿದುವು. ಸ್ವಲ್ಪದೂರ ಹೋದನಂತರ ಒಂದು ಬೆಕ್ಕು ಎದುರಾಯಿತು. ಅದು ಬಣ್ಣನೆಯ ಮಾತುಗಳಿಂದ ಕೇಳಿತು.

'ಎಲ್ಲಿಗೆ ಹೋಗುತ್ತಿರುವಿರಿ ಮಿತ್ರರೇ?'

'ನಾವು ಈವರೆಗೂ ದೂರ ಪಯಣಿಸಲಿಲ್ಲ. ಅಲ್ಲಿ ಇಲ್ಲಿ ಸುತ್ತಾಡಿ ಬರೋಣ ಅಂತ ಹೊರಟಿದೇವೆ.'

'ಅಂಗಡಿ ಸಾಲು ನೋಡಬೇಕೆ? ಮನೆಗಳ ಸಾಲು ನೋಡಬೇಕೆ?'

'ಮೊದಲು ಅಂಗಡಿ ಸಾಲು ನೋಡೋಣ.'

'ನನ್ನ ಹಿಂದೆಯೇ ಬನ್ನಿ.' ಬೆಕ್ಕು ಮುಂದೆ ನಡೆಯಿತು. ಅದರ ಮನದಲ್ಲಿ ಬಾತುಕೋಳಿಯ ಹಬ್ಬ ಮಾಡುವುದೇ ಉದ್ದೇಶ. ಅದರ ತಂತ್ರ ತಿಳಿಯದ ಬಾತುಕೋಳಿಗಳು ಕ್ವಾಕ್

ಕ್ವಾಕ್ ಎನ್ನುತ್ತ ಹಿಂದೆ ಹಿಂದೆ ನಡೆದುವು. ಬೆಕ್ಕು ಅಂಗಡಿ ಸಾಲು ಹಿಡಿದು ಒಂದು ಮಹಡಿಯ ಮೆಟ್ಟಲಿನ ಬಳಿ ನಿಂತಿತು. ಅವು ಒಳ ಬಂದರೆ ಹಿಡಿದುಕೊಳ್ಳಲು ಅನುಕೂಲಿಸುವ ಇಕ್ಕಟ್ಟಿನ ತಾಣ ಅದು.

'ಬನ್ನಿ, ಬನ್ನಿ! ಹೀಗೆಯೇ ಬನ್ನಿ!'

ಬೆಕ್ಕು ಬಿನ್ನಾಣದ ಮಾತಿನಿಂದ ಕರೆ ನೀಡಿತು.

ಸಂಚಿ-ಮಂಚಿ ಬಾಗಿಲಿಂದ ಹೊರಗೇ ನೋಡಿದುವು. ಒಳ ಹೋದರೆ ಇಕ್ಕಟ್ಟು ಎಂಬುದು ತಕ್ಷಣವೇ ಹೊಳೆಯಿತು.

'ಅಲ್ಲಿಗೇಕೆ ಬರಬೇಕು?'

'ಮಹಡಿ ಹತ್ತಿ ಹೋಗೋಣ'

'ಉಹೂ.....ಮಹಡಿಗೆ ಹೋಗುವುದು ಬೇಡ.'

'ಅಲ್ಲಿ ಹೆಚ್ಚಿನ ಅಂಗಡಿಗಳಿವೆ!'

'ನಾವು ಕೆಳಗೆ ನೋಡಿದ್ದೇ ಸಾಕು.'

'ಹಾಗಾದರೆ ಮುಂದೆ ಹೋಗೋಣವೇ?'

ಬೆಕ್ಕು ಬಾಯಿ ತುಟಿಗಳನ್ನು ನಾಲಿಗೆಯಿಂದ ಒರಿಸಿಕೊಳ್ಳುತ್ತ ಕೇಳಿತು.

'ನಿನ್ನ ಬಾಯಿ ನೀರು ನೋಡಿದರೆ ನಮಗೆ ಅಪಾಯ ಎನ್ನಿಸುತ್ತಿದೆ. ನಿನ್ನ ಪಾಡಿಗೆ ನೀನು ಹೋಗು, ನಮ್ಮ ಪಾಡಿಗೆ ನಾವು ಹೋಗುತ್ತೇವೆ.'

'ನಿಮಗೆ ದಾರಿ ಗೊತ್ತಿಲ್ಲವಲ್ಲಾ?'

'ಗೊತ್ತು ಪಡಿಸಿಕೊಂಡರಾಯಿತು.'

ಬೆಕ್ಕಿಗೀಗ ತುಂಬಾ ಅಸಮಾಧಾನ. ಹೇಗಾದರೂ ತೆಕ್ಕನೆ

ಹಿಡಿದುಕೊಳ್ಳೋಣವೇ? ಎಂಬ ಮನಸ್ಸು. ಅತ್ತಿತ್ತ ಕಣ್ಣಾಡಿಸುವುದರೊಳಗೇ ಮಂಚಿ ಹೇಳಿತು 'ಕ್ವಾಕ್, ಕ್ವಾಕ್! ನಾವಿನ್ನು ಹೋಗೋಣ. ಬೆಕ್ಕನ್ನು ನಂಬಬಾರದು. ನಂಬಿದರೆ ನಮ್ಮ ಪ್ರಾಣಕ್ಕೆ ಕುತ್ತು!'

'ಮಿಯಾವ್! ಮಿಯಾವ್! ನಾನು ಅಂತಹವನಲ್ಲ!'

'ಬೇಡ ಮಹರಾಯಾ! ನಿನಗೆ ನಮಸ್ಕಾರ! ಎನ್ನುತ್ತ ಸಂಚಿ-ಮಂಚಿ ಹಿಂತಿರುಗಿದುವು.



## ದೂರ ದೇಶದಲ್ಲಿ

ಅದೊಂದು ದೂರ ಪ್ರಾಂತ್ಯ. ಭಾರತ ವರ್ಷದ ಮೂಲೆ. ಸದಾ ರಣರಣಿಸುವ ಬಿಸಿಲು. ಬಣ ಬಣ ಒಣಗುವ ನೆಲ. ಬೇಸಿಗೆಯಲ್ಲಿ ನದಿ ಹೊಳೆ ತೊರೆ ಕೆರೆಗಳು ಬತ್ತಿಗಾರಾಗುವುದು ಸಾಮಾನ್ಯ. ಅಲ್ಲಿನ ಜನ ಆ ಒಣ ಬದುಕಿಗೇ ಅಂಟಿಕೊಂಡವರು. ತಮ್ಮ ಊರಿನಾಚೆ ಉತ್ತಮ ಜೀವನವಿದೆ ಎಂಬುದರ ಅರಿವು ಇಲ್ಲದವರು. ಆ ಬಡತನಕ್ಕೇ ಹೊಂದಿಕೊಂಡು ಬಾಳಿನಲ್ಲಿ ಸುಖವನ್ನು ಕಾಣದೆ ನರಳುತ್ತ ಮಸಣ ಸೇರುವರು.

ಹುಟ್ಟು ಸಾವುಗಳು ನಡೆಯುತ್ತಲೇ ಇರುತ್ತವೆ.

ಹೊಟ್ಟೆ ಬೆನ್ನಿಗೆ ಹತ್ತಿ ಕುಗ್ಗಿ ನಡೆಯುತ್ತಲೇ ಇರುತ್ತಾರೆ ಜನ.

ಬಡತನ-ಸಂಕಟ-ಕಷ್ಟ-ನಷ್ಟಗಳಿಗಾಗಿಯೇ ಈ ಹುಟ್ಟು ಎಂಬುದು ಅವರ ಜೀವನ ತಾತ್ಪರ್ಯ. ಆದ್ದರಿಂದ ಅವರಿಗೆ ಸುಖವೂ ಇಲ್ಲ. ದುಃಖವೂ ಇಲ್ಲ. ಜಡ ಜೀವನ, ಜಡಭಾವ. ಜಡನಿದ್ದೆ.

ಆ ಜನರಿಗಾಗಿ ದುಡಿದು ದುಡಿದು ಹಣ್ಣು ಹಣ್ಣಾದ ಒಂದು ಕುದುರೆ ಮತ್ತು ಒಂದು ಎತ್ತು ತುಂಬಾ ಸ್ನೇಹಿತರಾಗಿದ್ದುವು. ಎಲುಬಿನ ಹಂದರವಾದ ಮೈಯಲ್ಲಿ

ನಡೆಯಲಾರದಷ್ಟು ನಿತ್ರಾಣ. ಮೇಲಾಗಿ, ಮುಟ್ಟಿದರೆ ಮುಗ್ಗರಿಸುವಂತಿದ್ದುದರಿಂದ ಆ ಪ್ರಾಣಿಗಳು ಕಸಾಯಿಖಾನೆಯನ್ನು ಕಾಣಲಿಲ್ಲವೋ ಏನೋ.

ಎತ್ತು ಕುದುರೆಯ ಮುಖವನ್ನು ಮೂಸಿ, ನೆಕ್ಕಿ ಕಣ್ಣೀರಿಡುತ್ತ ಹೇಳಿತು 'ಅಯ್ಯಾ, ಗೆಳೆಯಾ! ಹೇಗಾದರೂ ನಾವು ಈ ಊರು ಬಿಟ್ಟು ಹೋಗೋಣ, ನೀನು ಸಹಕರಿಸಿದರೆ ನಿಧಾನವಾಗಿ ನಡೆಯಬಹುದು ಏನೆನ್ನುತ್ತಿ?'

'ನನಗೂ ಹಾಗೆನಿಸುತ್ತೆ, ನಡೆಯಲಾರೆ ಮಾತ್ರ.'

'ಸ್ವಲ್ಪ ಸ್ವಲ್ಪವೇ ನಡೆಯೋಣ. ಇಲ್ಲಿದ್ದರೆ ಬದುಕುವುದು ಸಾಧ್ಯವೇ ಇಲ್ಲ. ಆಯಸ್ಸು ತೀರದೆ ಸಾಯುವುದೂ ಇಲ್ಲ. ಹುಲ್ಲು ನೀರಿಲ್ಲದೆ ನರಳುವುದಕ್ಕಿಂತ ನಡೆಯುವುದು ಲೇಸು.'

'ಹೊಳೆ ಇದ್ದಿದ್ದರೆ ಮುಳುಗಿ ಸಾಯಬಹುದಿತ್ತು.'

'ಸಧ್ಯ, ಕುಡಿಯುವುದಕ್ಕೇ ನೀರಿಲ್ಲ. ಇನ್ನು ಮುಳುಗುವುದೆಲ್ಲಿ?'

ಇಬ್ಬರ ತುಟಿಗಳಲ್ಲೂ ತಿರಸ್ಕಾರದ ನಗೆ ಮೂಡಿ ಮಾಯವಾಯಿತು. ಎರಡು ಪ್ರಾಣಿಗಳೂ ಮಾತಾಡುತ್ತಲೇ ಮುಂದುವರಿದುವು. ಬೀಸುಗಾಳಿಗೆ ಶರೀರಗಳು ತೂಗುಯ್ಯಾಲೆಯಾಡುವಂತಿದ್ದುವು. ಕುದುರೆ ಒಣಗರಿಕೆಯ ಬೇರಿಗೆ ಬಾಯಿಡುತ್ತ 'ಬಸವಣ್ಣಾ! ನಿನ್ನ ಮಾತಿಗೆ ಒಪ್ಪಿ ನಡೆಯುತ್ತಿರುವೆ. ದೇವರು ದೂರದೇಶಕ್ಕೆ ನಡೆಯುವಷ್ಟು ಶಕ್ತಿ ಕೊಟ್ಟರೆ ಸಾಕು.'

'ನಾನೂ ಪ್ರಾರ್ಥಿಸುವುದು ಅದನ್ನೆ.'

'ದೂರ ದೇಶದಲ್ಲಿ ನಮಗೆ ಹುಲ್ಲು ನೀರು ಸಿಗಬಹುದಲ್ಲವೇ?'

'ಆ ನಂಬಿಕೆ ನನಗಿದೆ.'

'ಯಾವುದೋ ದೇಶದಲ್ಲಿ ಚಲಿಸುವ ರಸ್ತೆಗಳಿವೆಯಂತೆ. ಪಥಿಕರು ಸುಮ್ಮನೆ ನಿಂತಿದ್ದರೆ ಅವು ದೂರ ದೂರ ಒಯ್ಯುತ್ತವಂತೆ! ಅದು ಯಾವ ದೇಶವೋ!'

'ನಾವು ಅಲ್ಲಿದ್ದಿದ್ದರೆ ನಡೆಯುವ ಭಂಗ ಇರುತ್ತಿರಲಿಲ್ಲ ಅಲ್ಲವೆ?'

ಎರಡೂ ಸ್ವಲ್ಪ ಹೊತ್ತು ಯೋಚಿಸಿ ಸುಮ್ಮನಾದುವು. ಆ ದೇಶ ಯಾವುದು ಎಂಬುದನ್ನು ಬುದ್ಧಿ ಗ್ರಹಿಸಲಾರದೇ ಹೋಯಿತು.

   

ಎರಡೂ ನಡೆಯಲಾರದೇ ನಡೆಯುತ್ತ ಕಣ್ಣೀರಿಡುತಿದ್ದುವು. ಬಿಸಿಲಿನ ತಾಪ ತಡೆಯುವುದು ಕಷ್ಟ. ಹಸಿವು ನೀರಡಿಕೆಗಳಿಂದ ದಿನದಿನಕ್ಕೂ ನಿತ್ರಾಣ ಹೆಚ್ಚುತಿತ್ತು. ಇನ್ನೂ ಇನ್ನೂ ನಡೆಯಲಾರೆ ಎಂದು ಚೀರಿಡುವಷ್ಟು ಕಾಲುಗಳಲ್ಲಿ ನೋವು.

ಅಂದು, ಆಕಾಶದಲ್ಲಿ ಮಳೆ ಮೋಡಗಳು ಕಲೆತುವು. ಮಿಂಚು ಹೊಳೆಯಿತು. ಗುಡುಗು ಗರ್ಜಿಸಿತು. ಆಗಾಗ ತಣ್ಣನೆಯ ಬೀಸುಗಾಳಿ ಬೇರೆ. ಎರಡು ಪ್ರಾಣಿಗಳೂ ಆಕಾಶದ ಕಡೆ ತಲೆಯೆತ್ತಿ ನೋಡಿದುವು.

'ಮಳೆ ಬರುವುದು ಖಂಡಿತ. ಆಕಾಶವನ್ನು ನೋಡಿದರೆ ಭಾರೀ ಮಳೆ ಬರುವಂತಿದೆ.'

ಕುದುರೆಯ ಮಾತಿಗೆ ಮೌನ ಗತಿಯಲ್ಲಿ ತಲೆದೂಗಿ ಹೇಳಿತು ಎತ್ತು 'ಭಾರಿ ಮಳೆಗೆ ನಾವು ಸಿಕ್ಕಿದರೆ ಗತಿ ಮುಗಿದಂತೆಯೇ!'

'ಈಗ ಏನು ಮಾಡೋಣ? ನಮ್ಮ ರಕ್ಷಣೆ ಹೇಗೆ?'

'ನೋಡೋಣ, ದೇವರಿದ್ದಾನೆ.'

'ಇಷ್ಟು ದಿನ ಮಳೆಯಿಲ್ಲದೆ ಸೀರಿ ಸೀಕಲಾದೆವು. ಈಗ ಜಡಿ ಮಳೆಯಲ್ಲಿ ಕೊಚ್ಚಿ ಹೋಗುವ ಗೋಳು.'

ಕುದುರೆಯ ಕಳಕಳಿಗೆ ಏನುತ್ತರ ಹೇಳಬೇಕೋ ತಿಳಿಯಲಿಲ್ಲ ಗೆಳೆಯ ಎತ್ತಿಗೆ. ಹಿಂದೆ ಅನೇಕ ವೇಳೆ ಸಮಯಸ್ಫೂರ್ತಿಯಿಂದ ತಾನೆ ಸಲಹೆ ನೀಡುತಿದ್ದ ಕುದುರೆ ಇಷ್ಟೊಂದು ಕುಗ್ಗಿದರೆ ಹೇಗೆ?

ಎತ್ತು ಯೋಚಿಸಿ ಹೇಳಿತು-'ಮಳೆ ಬೀಳಲು ಇನ್ನೂ ಒಂದೆರಡು ತಾಸಿರಬಹುದಲ್ಲವೇ? ಅಷ್ಟರೊಳಗಾಗಿ ಹತ್ತು ಹದಿನೈದು ಮಾರು ನಡೆಯಲು ಸಾಧ್ಯ. ನೋಡೋಣ, ದೇವರು ಸಹಾಯ ಮಾಡಬಹುದು.'

ಕುದುರೆ ಮಾತಾಡದೆ ನಡೆಯಿತು. ಕಣ್ಣು ಕಿವಿಗಳು ಮಳೆಗಾಳಿಯನ್ನು ಗಮನಿಸುತಿದ್ದುವು. ಮುಂದೆ ಸ್ವಲ್ಪ ದೂರದಲ್ಲಿ ಒಕ್ಕಲು ಬಿಟ್ಟು ಹೋದ ಒಂದು ಜೋಪಡಿ ಕಂಡು ಬಂತು. ಅದರಲ್ಲಿ ರಕ್ಷಣೆ ಪಡೆಯುವ ಉದ್ದೇಶದಿಂದ ಚುರುಕು ನಡೆಯಲು ಪ್ರಯತ್ನ ಪಟ್ಟರೆ ಒಂದು ಹೆಜ್ಜೆಯನ್ನೂ ಬಿರುಸಾಗಿ ಮುಂದಿಡಲಾಗಲಿಲ್ಲ. ಅಂತೂ,

ಬಹಳ ಕಷ್ಟದಿಂದಲೇ ಜೋಪಡಿಯನ್ನು ಸೇರಿದುವು. ಸ್ವಲ್ಪೇ ಹೊತ್ತಿನೊಳಗಾಗಿ ಜಡಿಮಳೆ ಸುರಿಯಲಾರಂಭಿಸಿತು. ಮಳೆ ಬಿದ್ದು ಯಾವ ಕಾಲವಾಗಿತ್ತೋ. ಬೇಯುತಿದ್ದ ಬಿಸಿಲ ಬೇಗೆ ಒಮ್ಮೆಗೇ ತಣ್ಣಗಾಯಿತು. ಎತ್ತು ಕುದುರೆಗಳು ಸೂರಿನ ನೀರಿಗೆ ಬಾಯೊಡ್ಡಿ ಹೊಟ್ಟೆ ತುಂಬಾ ನೀರು ಕುಡಿದುವು. ಬಾಯಾರಿಕೆ ಸ್ವಲ್ಪ ಕಡಿಮೆಯಾದರೂ ದಣಿವು ಕಡಿಮೆಯಾಗಲಿಲ್ಲ. ಎರಡೂ ಅಲ್ಲೇ ಕಾಲು ಚಾಚಿ ಬಿದ್ದುಕೊಂಡುವು. ಸೂರು ಸೋರುತಿತ್ತು. ಮೈಮೇಲೆ ತಟಪಟ ನೀರು ಬಿದ್ದು ನೆಲವೂ ಒದ್ದೆಯಾಯಿತು. ಆದರೂ, ಜಡಿಮಳೆಯಿಂದ ರಕ್ಷಣೆ ಸಿಕ್ಕಿದುದು ಪರಮ ಸಂತೋಷ.

ಆ ದಿನವೆಲ್ಲಾ ಎಡೆಬಿಡದೆ ಸುರಿಯಿತು ಮಳೆ. ಒಮ್ಮೆ ಜೋರಾಗಿ ಸುರಿದರೆ ಇನ್ನೊಮ್ಮೆ ನಿಧಾನವಾಗಿ. ಮಳೆ. ಮಳೆ. ದಿನವೆಲ್ಲಾ ಮಳೆ.

   

ಭೂಮಿ ನೀರುಂಡು ತಣಿದರೆ ಲೋಕವೂ ತಣ್ಣಗೆ, ಕನಸು ಮನಸುಗಳೂ ತಣ್ಣಗೆ.

ಇಬ್ಬರು ಗೆಳೆಯರೂ ಹಾದಿಯಲ್ಲಿ ನೆನೆದು ಮೆತ್ತಗಾದ ದರುಗೆಲೆ ತಿಂದುಕೊಂಡೇ ಮುಂದಿನ ಪಯಣ ನಡೆಸಿದುವು. ತಾವು ಹಿಡಿದ ಹಾದಿ ಎಲ್ಲಿಗೆ ಹರಿಯುತ್ತದೋ ತಿಳಿಯದು. ಸುಮ್ಮನೆ ಕಾಲು ನಡೆದತ್ತ ಪಯಣ.

ಎರಡು ದಿನಗಳ ಮಳೆಯ ತಂಪಿನಿಂದ ಚಿಗುರೊಡೆಯತೊಡಗಿತ್ತು ಗರಿಕೆ ಹುಲ್ಲು. ಆದರೇನು?

ಅದು ಚಿಗುರಿ ಚಿಗುರಿ ಬೆಳೆದು ಬಾಯಿಗೆ ಸಿಕ್ಕುವುದು ಯಾವಾಗಲೋ.....ಅಲ್ಲಿಯವರೆಗೆ ದರುಗೆಲೆಯೇ ಗತಿ.

ದರುಗೆಲೆ ತಿಂದು ನೀರು ಕುಡಿದು ತಣ್ಣಗೆ ನಿದ್ರಿಸುವ ಗೆಳೆಯರಿಗೆ ಯಾವ ಯಾವ ಕನಸೋ.....ಎಚ್ಚರವಾದ ನಂತರ ಕುದುರೆ ಹೇಳಿತು 'ಮಿತ್ರ! ನಾನು ಕಂಡ ಕನಸಿನಲ್ಲಿ ಯಾವುದೋ ಮಂಗಳ ಲೋಕದಲ್ಲಿದ್ದೆ.....ನಿನಗೂ ಏನಾದರೂ ಕನಸು ಬಿತ್ತೆ?'

'ಬಿತ್ತು ಮಹಾರಾಯ! ನಾನು ಭೂಮಿಯ ಬಿರುಕಿನಲ್ಲಿ ಸಿಕ್ಕಿ ಮೇಲೇಳಲಾರದೇ ಒದ್ದಾಡುತಿದ್ದೆ!'

ಆ ಮಾತು ಕೇಳಿ ಕುದುರೆ ಬುಸ್ಸನೆ ನಿಟ್ಟುಸಿರು ಬಿಟ್ಟಿತು.

ಸ್ವಲ್ಪದೂರ ಸಾಗಿತು ಹಾದಿ.

'ಅದೋ ನೋಡು! ದೂರದಲ್ಲಿ ಕಾಣಿಸುವುದೇನು? ಹಸುರುಕ್ಕುವ ಕಾಡು! ನಾವು ನಮ್ಮ ನಾಡಿನ ಗಡಿ ದಾಟಿರಬಹುದು. ಓ! ಸ್ವಾಮಿ ನಾವು ಅಲ್ಲಿಯ ತನಕ ನಡೆವಬಲ್ಲೆವಾದರೆ ನಮಗೆ ಸಾವಿಲ್ಲ!'

'ಹೌದು! ಆದರೂ, ಅದು ಹತ್ತಿರದಲ್ಲಿಲ್ಲ ಬಿಡು. ಇನ್ನೂ ಬಹಳ ದೂರ ನಡೆಯಬೇಕು.'

'ಅದೂ ನಿಜವೇ. ವಿಶ್ರಾಂತಿ ಬೇಕೇ ಬೇಕು. ಆ ಹಸಿರನ್ನು ನೋಡಿ ಬಾಯಿಯಲ್ಲಿ ನೀರು ಊರುತ್ತಿದೆ. ಏನು ಮಾಡೋಣ?'

'ಮೊದಲು ವಿಶ್ರಾಂತಿ ಅನಂತರ ಯೋಚನೆ.' ಎರಡೂ ಕೊರಳು ಅಡ್ಡಹಾಕಿ ಮಲಗಿದುವು. ಸ್ವಲ್ಪ ಹೊತ್ತಿನಲ್ಲಿಯೇ ಎಂತಹ ನಿದ್ರೆ?

ದೂರ ದೇಶದಲ್ಲಿ ಹಾದಿ ಚಲಿಸುತ್ತ ಮುಂದುವರಿದಂತೆ ಇಲ್ಲಿಯೂ ಸಹ ಮುಂದುವರಿಯುವುದುಂಟೇ!'

ಎಚ್ಚರವಾದರೆ ಅವು ಇದ್ದುದು ಆ ಹಸುರ್ಲೋಕದಲ್ಲಿ!

ಆ ದಟ್ಟಡವಿಯಲ್ಲಿ ಒಂದು ಎತ್ತರ ಗೋಪುರದ ಶಿವಾಲಯ. ಅದರ ಗರ್ಭಗುಡಿಯಲ್ಲಿ ಒಂದು ಶಿವಲಿಂಗ. ಗೆಳೆಯರಿಬ್ಬರೂ ಒಡಲು ಬಿರಿಯುವಷ್ಟು ಹುಲ್ಲು ಮೇದು ಶಿವಾಲಯದಲ್ಲಿ ಮಲಗಿದರೂ ಕಾಡಿನಲ್ಲಿ ಹುಲಿ ಚಿರತೆಗಳಿರಬಹುದೇ ಎಂಬ ಭಯ ಮನದಲ್ಲಿ.

'ನಾವು ಇಲ್ಲಿಗೆ ಹೇಗೆ ಬಂದೆವು ಬಸವಣ್ಣಾ! ನನಗೆ ನಡೆದು ಬಂದ ನೆನಪಿಲ್ಲವಲ್ಲಾ?'

'ರಸ್ತೆ ಹರಿದು ಬಂದಿರಬಹುದು.'

ದೇವಾಲಯದ ಒಳಗಿಂದ ಶಿವಲಿಂಗ ನುಡಿಯಿತು,

'ನಾನು ಸೆಳೆತಂದೆ.'

ನಾಲ್ಕು ಕಿವಿಗಳೂ ನಿಮಿರಿದುವು.... ಓ ಇರಬಹುದು.

   

ಬೆಳಗಿನ ಝಾವ ಶಿವಲಿಂಗ ನುಡಿಯಿತು,

'ನಿಮಗೇನು ಬೇಕೋ ಅದನ್ನು ಕೇಳಿಕೊಳ್ಳಿ!'

ಎತ್ತು ಆ ಕೂಡಲೇ ಎದ್ದು ಹೋಗಿ ಶಿವಲಿಂಗದ ಮೇಲೆ ತಲೆಯಿಟ್ಟು ಹೇಳಿಕೊಂಡಿತು ನನ್ನ ಪ್ರಾಣ ಗೆಳಯನಿಗೆ ಒಳ್ಳಿತಾಗಲಿ!'

'ಅವನಿಗೇನು ಬೇಕು?'

'ಏನೋ ಗೊತ್ತಿಲ್ಲ. ಅವನಿಗೇನು ಬೇಕೋ ಅದು

ಕೈಗೂಡಲಿ!'

'ಒಳ್ಳೆಯದು!'

ಅನಂತರ ಕುದುರೆ ಗುಡಿಗೆ ಹೋಗಿ ಶಿವಲಿಂಗದ ಮೇಲೆ ತಲೆಯಿಟ್ಟು ಬೇಡಿಕೊಂಡಿತು. ನನ್ನ ಪ್ರೀತಿಯ ಗೆಳೆಯನಿಗೆ ಒಳ್ಳೆಯದಾಗಲಿ.'

'ಅವನಿಗೇನು ಬೇಕು?'

'ಏನೋ ಗೊತ್ತಿಲ್ಲ. ಅವನಿಗೇನು ಬೇಕೋ ಅದು ಕೈಗೂಡಲಿ!'

'ಆಗಲಿ!'

ಪ್ರಾಣಿಗಳು ಹೊರ ಬಂದುವು. ಇದ್ದಕ್ಕಿದ್ದಂತೆಯೇ ಪುಷ್ಟಿಯಾದ ಕುದುರೆ ಮೆಲ್ಲಮೆಲ್ಲನೆ ಮೇಲೇರಿ ಗಾಳಿಯಲ್ಲಿ ತೇಲಿ ಆಕಾಶಮಾರ್ಗವಾಗಿ ಸ್ವರ್ಗಕ್ಕೆ ಹೋಯಿತು!

ಅಹಾ! ಎಂತಹ ಸುಂದರ ನೋಟ! ಕುದುರೆ ನನ್ನನ್ನು ಒಂಟಿಯಾಗಿ ಬಿಟ್ಟು ಹೋಯಿತೇ? ಎಂದು ಗೋಳಾಡಿದ ಎತ್ತು 'ನಿನಗೆ ಜೀವಸಹಿತ ಸ್ವರ್ಗ ಸೇರುವ ಆಸೆಯಿದ್ದುದು ನನಗೆ ತಿಳಿಯಲಿಲ್ಲವಲ್ಲಾ!' ಎಂದು ಕಣ್ಣೀರು ಕರೆಯಿತು.

ಅದೇ ಸಮಯದಲ್ಲಿ ಎತ್ತು ನಿಂತೆಡೆ ನೆಲ ಬಿರುಕು ಬಿಟ್ಟು ಎತ್ತು ಅದರೊಳಗೆ ಮುಳುಗುತ್ತಲೂ ತಿಳಿನೀರಿನ ಬುಗ್ಗೆಯೆದ್ದು ಬುಳು ಬುಳು ಹರಿಯುತ್ತ ತನ್ನ ಹುಟ್ಟೂರಿನೆಡೆಗೆ ನದಿಯಾಗಿ ಹರಿದು ಒಣ ಭೂಮಿಯನ್ನು ತಣಿಸಿತು.

ಆಕಾಶದಿಂದ ಕುದುರೆ ಮಳೆ ಮೋಡಗಳನ್ನು ಕರೆಯಿತು. ಅಹ, ಎಂತಹ ಚೆನ್ನಾದ ಮಳೆ! ಪರಿಸರವೆಲ್ಲಾ ತಂಪಾಗುವಂತಹ ಮಳೆ!

'ನನ್ನ ಬಯಕೆ ಈಡೇರಿತು!' ಎಂದಿತು ಕುದುರೆ.

'ನನ್ನ ಬಯಕೆಯೂ ನೆರವೇರಿತು!' ಎಂದಿತು ಎತ್ತು.

ಶ್ರಮ ಸಾಧನೆಯ ಸಿದ್ಧಿ
ಶ್ರಮ ಜೀವನದ ಸಿದ್ಧಿ
ಭಕ್ತಿಭಾವದ ಸಿದ್ಧಿ
ಭಕ್ತಿ ಬಾಗ್ಯದ ಸಿದ್ಧಿ
ಎಲ್ಲವೂ ಕೂಡೆ ಸಂಜೀವನ ಸಿದ್ಧಿ



# ಜೈ ಜ್ಞಾನಾರ್ಥಿ !

ನಿಚ್ಚಂ ಜಗದ ಸಂಕಟ ತೊಳೆಯೆ
ಸರ್ವಾಂಗೀಣ ಸಹಕಾರ ಬೆಳೆಯೆ
ಸರ್ವೋದಯ ನೇಮದಿಂದೆ-

ಕಡು ಬಡತನ-ಸಿರಿತನ-ಪರತನ
ಜಡಿಕಟ್ಟಿ-ಅಡಿಮೇಲಾಗಿಸೆ, ಸುಜನ
ಸಮತೋಲನ ಭಾವದಿಂದೆ-

ನಿರಕ್ಷರ-ನಿರ್ವೀರ್ಯ-ನಿರಾಸಕ್ತ
ನಿಃಸತ್ವ-ನಿಷ್ಪ್ರಯೋಜನ-ನಿವೃತ್ತಿ
ನಿಸ್ಸಾರಗಳ ನಿರ್ನಾಮದಿಂದೆ-

ಅಂತೇವಾಸಿಗಳ ಸರ್ವೋದ್ಧಾರ!
ಸಂಜೀವನಾ ಪರಮಪಾವನಾ
ಜೈ ಜ್ಞಾನಾರ್ಥಿ! ಜೈ ಜ್ಞಾನಧನ!

# ಲಕ್ಷ್ಮೀ ಪ್ರಕಾಶನ

359, ಕಡಿದಾಳ್ ನಿಲಯ, 14ನೇ ಅಡ್ಡರಸ್ತೆ, ಸದಾಶಿವನಗರ

ಬೆಂಗಳೂರು - 560 080


## ಮಲ್ಲಿಕಾ ಕೃತಿಗಳು (ಕಾದಂಬರಿಗಳು)

೧. ಜೀವನಗಂಗಾ
೨. ಡಾ|| ಅಘೋರ
೩. ಡಾ|| ಕಮಲೇಶ್
೪. ವಂದೇ ಮಾತರಂ
೫. ಅನಂತಾನಂತದೆಡೆಗೆ
೬. ಮನೋನ್ಮಣಿ
೭. ಸಂತ್ರಾಸಿನಿ
೮. ಆಸೆಯ ಸುಳಿಯಲ್ಲಿ
೯. ಪದ್ಮಾಲಯ
೧೦. ಶ್ರದ್ಧಾಲಯ
೧೧. ಕಮಲಾನಿ ಕಥಾ (ಕಥಾ ಸಂಕಲನ)
೧೨. ಬಹುರತ್ನವಸುಂಧರಾ
೧೩. ರತ್ನಗರ್ಭಾವಸುಂಧರಾ
೧೪. ಸುಧಾಮಣಿ
೧೫. ರಮಣೀಮಣಿ
೧೬. ಲಿಯೋನಾ
೧೭. ಶ್ರೀಮುಖಿ
೧೮. ಶ್ರೀಹರ್ಷಲಾ
೧೯. ವೈಶಾಖೀಪರ್ವ
೨೦. ಫಾಲ್ಗುಣೀಪರ್ವ
೨೧. ಮಣಿಮೇಖಲಾ
೨೨. ಮಣಿಕರ್ಣಿಕಾ (ಕವಿತಾ ಸಂಕಲನ)
೨೩. ಪೂಜವಸಾನ ಸಮಯೇ..!
೨೪. ಧ್ಯಾನಾವಸಾನ ಸಮಯೋ..!
೨೫. ಗಗನ ಕುಸುಮ
೨೬. ಜೀವನ ಕುಸುಮ
೨೭. ಚಂಪಕರಾಜಿ
೨೮. ಬಕುಳರಾಜಿ
೨೯. ಕಸ್ತೂರಿ ಮಾಲಿಕಾ
೩೦. ಮಂದಾರ ಮಾಲಿಕಾ
೩೧. ವಿಜಯ ಗಾಥಾ
೩೨. ಗಾನ ತೀರ್ಥ
೩೩. ನಾದ ಬಿಂದು
೩೪. ಕವ್ಯಾನಂದ ನಂದಿನಿ
೩೫. ಭಾವನಂದ ನಂದಿನಿ
೩೬. ಸಂಗೀತ ಪುಷ್ಪಾಂಜಲಿ
೩೭. ಆತ್ಮ ಗೀತಾಂಜಲಿ (ಸಂಜೀವನ ಕಾವ್ಯ)
೩೮. ಮಂಗಳ ಭಾರತಿ
೩೯. ಕಲ್ಯಾಣ ಭಾರತಿ
೪೦. ಉತ್ತರೋತ್ತರಣಿ
೪೧. ರಾಗಾನುರಾಗಿಣಿ
೪೨. ಪ್ರಪುಲ್ಲ ಭಾರತ (ಪೌರಾಣಿಕ ನಾಟಕ)
೪೩. ಪುಣ್ಯಾಭಿಸಾರ
೪೪. ಪುಣ್ಯಪಯೋನಿಧಿ (ಸಾನೆಟ್‌ಗಳು)
೪೫. ತರಂಗಿಣಿ (ಗದ್ಯಕಾವ್ಯ)
೪೬. ಐಂದ್ರ ಕೀರ್ತಿ ಕೇತನಂ (ಉಪನಿಷತ್ಕಥಾ)
೪೭. ಕೃತಂ ಸ್ಮರ ಕ್ರತುಂ ಸ್ಮರ (ಶಿಶು ಸಾಹಿತ್ಯ)
೪೮. ದೂರ ದೇಶದಲ್ಲಿ
೪೯. ಬೆಳದಿಂಗಳ ರಾತ್ರಿ
೫೦. ರಂಗನ ಸಾಹಸ
೫೧. ಓಹಿಯೋಜ ಸರೋವರ
೫೨. ಕೌಶಿಕನ ಗೊಂಬೆ
೫೩. ವಿಶೇಷ ಸುದ್ದಿ
೫೪. ಕಲ್ಯಾಣಿ ರಾಗಿಣಿ (ಮಹಾಕಾವ್ಯ)
೫೫. ಶ್ರೀ ವಿವೇಕಾನಂದ ವಿಜಯಂ